9ನೇ ರಾಜ್ಯ ಬಂಡಾಯ ಸಾಹಿತ್ಯ ಸಮ್ಮೇಳನದ ನೆನಪು

# ಅನ್ವೇಷಣೆ

ಸಾಹಿತ್ಯ ಸಾಂಸ್ಕೃತಿಕ ಪತ್ರಿಕೆ

ಸಂಚಿಕೆ 39



ಬಂದೂಕಿನ ಬಾಯಲ್ಲಿ
ಗುಬ್ಬಿ
ಗೂಡು ಕಟ್ಟುತ್ತದೆ.
—ರಮಜಾನ್ ದರ್ಗಾ



ಬೆಲೆ ರೂ. 5/-

ಪ್ರಗತಿಪರ ವಿಚಾರಗಳಿಗೆ

# ಅನ್ವೇಷಣೆ

ಸಾಂಸ್ಕೃತಿಕ ಚಟುವಟಿಕೆಗಳಿಗೆ

ಸಂಪುಟ : 6 ಜೂಲೈ-ಆಗಸ್ಟ್ 90 ಸಂಚಿಕೆ: 39



o 'ಅನ್ವೇಷಣೆ' ಸಾಹಿತ್ಯ – ಸಾಂಸ್ಕೃತಿಕ ಚಟುವಟಿಕೆಗಳಿಗೆ ಮೀಸಲಾದ ದ್ವೈಮಾಸಿಕ.

o ಪ್ರಕಟಣೆಗೆ ಕಳುಹಿಸುವ ಲೇಖನ ವಿಮರ್ಶಾ ಬರಹ, ಕವನಗಳನ್ನು ಆದಷ್ಟು ಟೈಪು ಮಾಡಿ ಕಳುಹಿಸಿ.

o ಅಪ್ರಕಟಿತ ಬರಹ ವಾಪಸ್ಸು ಬೇಕಿದ್ದರೆ ಸಾಕಷ್ಟು ಅಂಚೆ ಚೀಟಿ ಇರಿಸಿ.

o ವಿಳಾಸ ಬದಲಾದರೆ ದಯವಿಟ್ಟು ತಿಳಿಸಿ

o ಚಂದಾ ಹಣವನ್ನು M.O. ಇಲ್ಲವೆ D.D. ಮೂಲಕ ಕಳುಹಿಸಿ. ಚೆಕ್ ಕಳುಹಿಸುವಾಗ ರೂ. 5 ಹೆಚ್ಚು ಕಳುಹಿಸಿ.

o ವಾ.ಚಂದಾ ರೂ. 35 (ವ್ಯಕ್ತಿಗಳಿಗೆ)
ರೂ. 50 (ಸಂಸ್ಥೆ ಮತ್ತು ಗ್ರಂಥಾಲಯ)
3 ವರ್ಷಕ್ಕೆ ರೂ. 100 (ವ್ಯಕ್ತಿಗಳಿಗೆ)
ಆಜೀವ ರೂ. 400 (ವ್ಯಕ್ತಿಗಳಿಗೆ)
ರೂ. 500 (ಸಂಸ್ಥೆ/ಗ್ರಂಥಾಲಯಗಳಿಗೆ)

ಸಂಪರ್ಕ ವಿಳಾಸ

ಸಂಪಾದಕ. "ಅನ್ವೇಷಣೆ"
478, 11ನೇ ಎಂ. ಸಿ. ಬಡಾವಣೆ ರಸ್ತೆ,
ವಿಜಯನಗರ, ಬೆಂಗಳೂರು 560 040.

## ಸಂಪಾದಕೀಯ

ಸೆಪ್ಟೆಂಬರ್ ೧೫-೧೬ ರಂದು ಚಿತ್ರದುರ್ಗದಲ್ಲಿ ೯ನೇ ರಾಜ್ಯ ಬಂಡಾಯ ಸಾಹಿತ್ಯ ಸಮ್ಮೇಳನದ ಸಮಾವೇಶ. ಹತ್ತು ತುಂಬಿ ಹನ್ನೊಂದಕ್ಕೆ ಹೆಜ್ಜೆ ಇರಿಸಿರುವ ಬಂಡಾಯ ಸಂಘಟನೆ ದಿನದಿಂದ ದಿನಕ್ಕೆ ಪುಷ್ಟಿಗೊಳ್ಳುತ್ತಿದೆ. ಸೈದ್ಧಾಂತಿಕ ನಿಲುವಿನ 'ಪ್ರಗತಿಪರ ವಿಚಾರಗಳು' ಸಾಹಿತ್ಯ, ಸಾಂಸ್ಕೃತಿಕ ಕ್ಷೇತ್ರದಲ್ಲಿ ತಳವೂರಿವೆ. ಬಂಡಾಯ ಸಂಘಟನೆಯನ್ನು ಮೂದಲಿಸುವ ಮತ್ತು ಇಲ್ಲಿನ ಸಾಹಿತ್ಯದ ಬಳಿಗೂ ಸುಳಿಯದ ಮನಸ್ಸುಗಳಿಗೆ ಬಂಡಾಯದ ಜೀವಂತಿಕೆಯನ್ನು ಅನಿವಾರ್ಯ 'ಒಪ್ಪು'ಗಳ ಮೂಲಕ ತಲೆದೂಗುವ ಸಂದರ್ಭ ಈಗ ಬಂದಿದೆ. ಇವೊತ್ತು ಒಂದಿಲ್ಲೊಂದು ಕಾರಣಕ್ಕೆ ಬಂಡಾಯ ಸಾಹಿತ್ಯದ ಅನಿವಾರ್ಯತೆಯನ್ನು ಒಪ್ಪುವವರು ಕ್ರಮೇಣವಾದರೂ ತಮ್ಮ ಬರಹಗಳಲ್ಲಿ ಬದಲಾವಣೆ ಯನ್ನು ತರುವವರೇ ಆಗಿರುವುದು ಸಂತೋಷದ ಸಂಗತಿ. ಅಷ್ಟರ ಮಟ್ಟಿಗೆ ಬಂಡಾಯದ ಕ್ರಿಯಾಶೀಲತೆಯನ್ನು, ಜೀವಂತಿಕೆಯನ್ನು ಸ್ವಾಗತಿಸುವ ದೊಡ್ಡ ಮನಸ್ಸಿದ್ದರೆ ಸಾಹಿತ್ಯ ಕ್ಷೇತ್ರ ಕೊಂಚ ಆರೋಗ್ಯಕರವಾಗಿರಲು ಸಾಧ್ಯ.

ಶ್ರೇಷ್ಠ ಸಾಹಿತ್ಯದ ಪರಿಕಲ್ಪನೆಯೇ ದಾರಿ ತಪ್ಪಿಸುವಂಥಾದ್ದು. ಇಂದು ಇದನ್ನು coin ಮಾಡಲು ಅಳತೆಕಡ್ಡಿ, ತೂಕದ ಬಟ್ಟುಗಳನ್ನು ಬಳಸುವವರು ತಮ್ಮೆಲ್ಲ ಬರಹಗಳ ಉದ್ದ-ಅಗಲ ತೂಕವನ್ನು ಮರು ಆಲೋಚನೆಯಲ್ಲಿ ನೋಡಬೇಕಾಗಿದೆ.

ಈಚೆಗೆ (ಜೂನ್ ೩೦, ಜುಲೈ ೧ ರಂದು) ಕನ್ನಡ ಸಾಹಿತ್ಯ ಪರಿಷತ್ತಿನವರು ಬಂಡಾಯದ ಹತ್ತು ವರ್ಷಗಳ ಸಂದರ್ಭದಲ್ಲಿ ಹಮ್ಮಿಕೊಂಡ ಕಾರ್ಯಕ್ರಮಗಳು ಪರಿಷತ್ತಿನಂಥ ಸಂಸ್ಥೆಗೂ ಸಹ ಬಂಡಾಯದ ಅನಿವಾರ್ಯತೆಯ ಅರಿವು ಮೂಡಿದ್ದು ಈಗ ನೆನಪು. ಹತ್ತು ವರ್ಷಗಳ ಹಿಂದೆ ಯಾವ ಯಜಮಾನ ಸಂಸ್ಕೃತಿಯ ಪ್ರತೀಕದಂತೆ ಕಾಣುತ್ತಿತ್ತೋ ಅದೇ ಸಂಸ್ಥೆ ಜನಪರ ವಿಚಾರಗಳ ಬೆಳವಣಿಗೆಗೆ ಅಡಿಪಾಯ ಹಾಕಲು ಹೊರಟಿರುವುದು ಇದು 'ಜನಪರ' ಆಗುವುದರತ್ತ ಹೊರಟ ಸೂಚಕವೆ ?

ಈ ಸಂಚಿಕೆ ಒಂದು ಮಹತ್ವದ ವಿಚಾರಗಳ ಸಂಗ್ರಹವನ್ನೊಳಗೊಂಡಿದೆ. ಸಾಹಿತ್ಯ ಪರಿಷತ್ತಿನ ಸಮಾರಂಭದಲ್ಲಿ ಮಂಡಿಸಿದ ವಿವಿಧ ಗೋಷ್ಠಿಗಳ ಮೂರು ಪ್ರಬಂಧಗಳು (ಪುರುಷೋತ್ತಮ ಬಿಳಿಮಲೆ, ಹರಿಹರಪ್ರಿಯ, ಸರಜೂ ಕಾಟ್ಕರ್) ಬಂಡಾಯದ ನೆಲೆಯನ್ನು, ಸಾಹಿತ್ಯವನ್ನು ವಿಚಾರಾತ್ಮಕವಾಗಿ, ವ್ಯಕ್ತಪಡಿಸುವಂಥವುಗಳಾಗಿವೆ. 'ಬಂಡಾಯ' ವಿಭಿನ್ನ 'ಇಸಂ'ಗಳ ಆಲೋಚಕರು ಸೇರಿ ಬೆಳೆಸಿರುವ ಸಂಘಟನೆಯಾದರೂ, ಇಲ್ಲಿ ಭಿನ್ನಾಭಿಪ್ರಾಯಗಳ ನಡುವೆಯೂ ಒಂದೇ ವೇದಿಕೆಯಲ್ಲಿ ಅವರವರ ವಿಚಾರಗಳನ್ನು ಹೇಳುವ ಸ್ವಾತಂತ್ರ್ಯ ಪಡೆದಿರುವುದು ಈ ಸಂಘಟನೆಗಿರುವ ಹೆಗ್ಗಳಿಕೆ. 'ಅನ್ವೇಷಣೆ' ಸಹಾ ಸದಾ ಆರೋಗ್ಯಕರ ವಿಚಾರಗಳ ಚರ್ಚೆಯ ವೇದಿಕೆಯಾಗಿದ್ದು ಈ ಸಂಚಿಕೆಯಲ್ಲಿ ಇಬ್ಬರು ಬಂಡಾಯ ಗೆಳೆಯರಾದ "ಆರ್ಕೆ" ಮತ್ತು "ಭಂಡಾರಿ" ಅವರ ಚರ್ಚಾರ್ಹ ವಿಚಾರಗಳೂ ಇವೆ. ವಿಚಾರಗಳ ವೈಯಕ್ತಿಕತೆಗಿಂತ ಬಂಡಾಯ ಸಾಹಿತ್ಯ ಸೃಷ್ಟಿ ಮತ್ತು ಸಂಘಟನೆಗೆ ಸಂಬಂಧಿಸಿದ ವಿಚಾರಗಳ ವಿನಿಮಯ ಇದಾಗಿರುವುದರಿಂದ ನಮ್ಮನ್ನು ನಾವು ಗಟ್ಟಿಗೊಳಿಸಿಕೊಳ್ಳುವ ಸಂದರ್ಭದಲ್ಲಿದ್ದೇವೆಂದು ಭಾವಿಸಬಹುದಾಗಿದೆ.

ವಿ. ೯.೯.೧೯೯೦ — ಸಂಪಾದಕ

ಪ್ರಿಯರೆ,

''ಅನ್ವೇಷಣೆ'' ಚಂದಾ ಬಾಕಿ ಕಳುಹಿಸಿ ಎಂದು ವೈಯಕ್ತಿಕವಾಗಿ ಎಲ್ಲಾ ಚಂದಾದಾರರಿಗೂ ಬರೆಯಲು ಸಾಧ್ಯವಾಗಿಲ್ಲ. ನೂರಾರು ಮಿತ್ರರಿಗೆ ಪತ್ರಿಕೆ ತಲುಪುತ್ತಿದ್ದರೂ 'ಮೌನ'ವಾಗಿರುತ್ತಾರೆ. ಈಗ ಅಂಥವರು ಪತ್ರಿಕೆ ಬೇಕು/ಬೇಡಗಳ ಬಗ್ಗೆ ದಯವಿಟ್ಟು ತಿಳಿಸಿ. ಪತ್ರಿಕೆ ಬೇಕಿದ್ದವರು 'ಬಾಕಿ' ಕಳುಹಿಸುವುದರ ಮೂಲಕ ಪತ್ರಿಕೆ ಉಳಿಸಿ ಬೆಳೆಸಲು ಸಹಕರಿಸಿ ಎಂದು ಈ ಮೂಲಕ ಮನವಿ ಮಾಡಿಕೊಳ್ಳುತ್ತಿರುವೆ.

ಜೊತೆಗೆ ಕಾಲೇಜು ಅಧ್ಯಾಪಕ ಮಿತ್ರರಲ್ಲೊಂದು ಮನವಿ : ನಿಮ್ಮ ಕಾಲೇಜು ಗ್ರಂಥಾಲಯಕ್ಕೆ 'ಅನ್ವೇಷಣೆ' ತರಿಸಿಕೊಳ್ಳುವ ವ್ಯವಸ್ಥೆ ಮಾಡಿ-ಬರೆಯಿರಿ.

–ಸಂಪಾದಕ

## ಈ ಸಂಚಿಕೆಯ ಲೇಖಕರು/ವಿಳಾಸ

o ಡಾ॥ ಪುರುಷೋತ್ತಮ ಬಿಳಿಮಲೆ, ಕನ್ನಡ ವಿಭಾಗ, ಮಂಗಳೂರು ವಿಶ್ವ ವಿದ್ಯಾಲಯಂ,ಮಂಗಳ ಗಂಗೋತ್ರಿ–574119 o ಸರಜೂ ಕಾಟ್ಕರ್, "ಕಾವ್ಯ", ಮಹಾಂತೇಶನಗರ, ಬೆಳಗಾಂ–590016. o ಎಸ್. ವೆಂಕಟವಿಶ್ವನಾಥ, 165, 14ನೇ ಕ್ರಾಸ್, 1ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು—560 010.
o ನಜೀರ್ ಚಂದಾವರ, ರಾಮನಗರ ಬಡಾವಣೆ, ಸಿರಸಿ—581 401. (ಉ.ಕ)
o ವಿನಯಾ ನಾಯಕ್, ನಾಡುಮಸ್ಕೇರಿ, ಸಿರಸಿ, (ಉ.ಕ.) o ಶೋಭರಾವ್, ಸ್ನಾತಕೋತ್ತರ ವಿಭಾಗ, ಕೇಂದ್ರ ಜೇನು ಸಂಶೋಧನ ಕೇಂದ್ರ ಶಿವಾಜಿನಗರ, ಪುಣೆ-411016 (ಮಹಾರಾಷ್ಟ್ರ). o ಆಶಾ ಕಡಪಟ್ಟಿ c/o ಬಿ.ಎನ್. ಕಡಪಟ್ಟಿ ಎಂ. ಇ. ಎಸ್. ಆಫೀಸ್ ಏರ್‌ಫೋರ್ಸ್ ಸ್ಟೇಷನ್, ಸಾಂಬ್ರಾ (ಬೆಳಗಾವಿ)
o ಡಾ॥ ಆರ್ಕೆ, ಮಣಿಪಾಲ ಜ್ಯೂನಿಯರ್ ಕಾಲೇಜಂ, ಮಣಿಪಾಲ–576119.
o ಆರ್. ವಿ. ಭಂಡಾರಿ, ಅರೆ ಅಂಗಡಿ, ಹೊನ್ನಾವರ-ತಾ॥ (ಉ.ಕ.)

# ೧. ನಿರಾಶೆಯ ಕಡಲು

—ಆಶಾ ಕಡಪಟ್ಟಿ

ದುಃಖ ಹುದುಗಿದೆ ಎದೆಯಾಳದಲಿ
ಉಕ್ಕಿ ಬರುತಿದೆ ತೆರೆ ತೆರೆಗಳಲಿ
ಮಿಕ್ಕಿ ಸಹಿಸಿದ ಮೇಲು ನೋಟಕೆ
ತೆರೆಗಳಾಡುವ ಆಟದಂತಿದೆ.
ಕಡಲ ಪ್ರೀತಿ ಕರಗಿ ಹೋಗಿದೆ
ಮುಗುಳು ನಗೆಯು ಮುಳುಗಿ ಹೋಗಿದೆ
ಎದೆ ಎದೆಯಲಿ ನೋವು ತುಂಬಿದೆ
ಕಣ್ಣು ಕಡಲು ತುಂಬಿ ನಿಂತಿದೆ.
ಆಶೆಯೆಂಬ ಕಡಲಿನಲ್ಲಿ
ಈಜು ಬಿದ್ದು ಹುಡುಕಿದೆ
ಮುತ್ತು ಸಿಗದೆ ಮುದುಡಿಕೊಂಡೆ
ಮತ್ತೇ ಹುದುಗಿದೆ ಕತ್ತಲಿನಲಿ.

# ೨. ಮೌನ

ಮೌನ ರಾತ್ರಿಯಲಿ ಮೌನವಾಗಿರಬೇಡ
ರಾತ್ರಿಯೊಂದೇ ಮೌನವಾಗಿರಲಿ.
ನನ್ನ ನಿನ್ನ ಮಾತುಗಳು
ಈ ರಾತ್ರಿ ತುಂಬ ಆರಳಲಿ
ನೀನು ಮೌನವಾದರೆ
ನಾನೂ ಮೌನಿಯಲ್ಲವೇ ?
ಮಾತು ಮರೆಯಿಸಿ
ಮೈ ಮತ್ತೇರಿಸಿ
ಮತ್ತ್ಯಾವುದೋ ಲೋಕಕ್ಕೆ
ಕರೆದೊಯ್ದು ಕೈಬಿಟ್ಟಾಗ
ನನ್ನ ಹುಡುಕಿ ಸೇರುವಲ್ಲಿ
ಮೌನ ನನ್ನ ಮುಳುಗಿಸಿದರೆ ?

# ಪುಸ್ತಕ ಸ್ವೀಕಾರ

- ಹೊಸ ದಿಕ್ಕು (ವಿಮರ್ಶೆ) ಲೇ: ಡಾ॥ ಬಸವರಾಜ ಸಬರದ, ಪುಟ 164 ಬೆಲೆ ರೂ. 30, ಪಲ್ಲವಿ ಪ್ರಕಾಶನ, 9-1-245, ಕೆ.ಇ.ಬಿ.ರಸ್ತೆ, ಬೀದರ್-1
- ಹೊಸ ಆಲೋಚನೆ (ವಿಮರ್ಶೆ) ಡಾ॥ ಬಸವರಾಜ ಸಾದರ, ಪುಟ 128, ಬೆಲೆ ರೂ. 15, ಶಿವಶಕ್ತಿ ಪ್ರಕಾಶನ, ರಾಯಚೂರು-585401.
- ಒಂದು ಮಾತು : ಎ.ಎಸ್. ಮೂರ್ತಿ, ಪುಟ 212, ಬೆಲೆ ರೂ. 25.
- "ಆವ್-ರಾ-ಬಾ-ವಾ" (ನಾಟಕ) ಎ. ಎಸ್. ಮೂರ್ತಿ, ಪುಟ 52, ಬೆಲೆ ರೂ. 14. (ಮೇಲಿನ ಎರಡೂ ಪುಸ್ತಕಗಳ ಪ್ರಕಾಶಕರು: ವನಮಾಲಾ ಪ್ರಕಾಶನ, 5ನೇ ಕ್ರಾಸ್, ಹನುಮಂತನಗರ, ಬೆಂಗಳೂರು-560019.)
- ಕನ್ನಡತನ ಮತ್ತು ಭಾರತೀಯತೆ ಲೇ: ಡಾ॥ಪಿ.ವಿ. ನಾರಾಯಣ, ಪುಟ 44 ಬೆಲೆ ರೂ.5 o Sweetness and Light (Kannada Culture)by Dr.M.Chidananda Murthy(Trans: Pro.L.S.Sheshagiri Rao) Pages 32, Price Rs 7. (Second Edition-1990), ಮೇಲ್ಲಿನ ಎರಡೂ ಪುಸ್ತಕಗಳ ಪ್ರಕಾಶಕರು : ಸಾಹಿತಿಗಳ ಕಲಾವಿದರ ಬಳಗ, 6/ಎ, ಮಿಂಚು, 4ನೇ ಕ್ರಾಸ್, ವಿಜಯನಗರ 2ನೇ ಹಂತ, ಬೆಂಗಳೂರು-40.
- ದಲಿತ ಲೋಕದ ಒಳಗೆ (ವಿಮರ್ಶೆ-ವಿಚಾರ) ಎಲ್. ಹನುಮಂತಯ್ಯ, ಪುಟ 90, ಬೆಲೆ ರೂ. 12, ವಾಹಿನಿ ಪ್ರಕಾಶನ, ಬೆಂಗಳೂರು-560 003.
- ಮರಣ ಶಿಕಾರಿ (ಕಾದಂಬರಿ) ಬಾಲಕೃಷ್ಣ ಕಾಕತ್ಕರ್, ಪುಟ 176, ಬೆಲೆ. ರೂ. 22, ಜನ ಸಾಹಿತ್ಯ ಪ್ರಕಾಶನ, ಚಾಮರಾಜಪೇಟೆ, ಬೆಂಗಳೂರು-560 018.
- ಗುಲಾಬಿ (ಕವನ ಸಂಕಲನ) ಪ್ರಹ್ಲಾದ ಬೆಟಗೇರಿ, ಪುಟ 51, ಬೆಲೆ ರೂ. 12 ಅಂಕುರ ಪ್ರಕಾಶನ, ಬಸವನಗುಡಿ, ಬೆಂಗಳೂರು-560004.
- ಕತ್ತಲ ನಾಡಿನ ಹಾಡು (ಕವನ ಸಂಕಲನ)ಎಲ್. ರಂಗನಾಥ ಶಿರಾ, ಪುಟ 96, ಬೆಲೆ ರೂ. 20, ಪಂಚಮ ಪ್ರಕಾಶನ, ಲಕ್ಷ್ಮೀ ನಾರಾಯಣಪುರ, ಬೆಂ-21.
- ಸ್ವಾತಂತ್ರ್ಯದ ತೇರು (ದೇಶ ಭಕ್ತಿ ಗೀತೆಗಳು). ಕೃಷ್ಣಮೂರ್ತಿಕಾಟಿ,ಪುಟ 40, ಬೆಲೆ ರೂ. 10, ಪ್ರತಿಭಾ ಗಂಗೋತ್ರಿ ಪ್ರಕಾಶನ, ಆನೇಕಲ್-562106.
- ಅಕ್ಷಯ (ಕವನ ಸಂಕಲನ) ಸಂ: ಕೆ. ಎಂ. ಮುನಿಕೃಷ್ಣಪ್ಪ (ಪ್ರ. ಸಂ: ಎಲ್ಲೇಗೌಡ ಬೆಸಗರಹಳ್ಳಿ) ಪುಟ 70, ಬೆಲೆ ರೂ. 8, ಬೆಂಗಳೂರು ಗ್ರಾಮಾಂತರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-560 018.
- ನಿರೀಕ್ಷೆ (ಕಥಾಸಂಕಲನ) ಶಿವಾನಂದ ಅನಾಡ, ಪುಟ 105, ಬೆಲೆ ರೂ. 12, ಪೂರ್ಣಜ್ಞಾನ ಪ್ರಕಾಶನ, ಸಿರ್ಸಿ-581401.

# ಬಂಡಾಯ ಸಾಹಿತ್ಯ : ಒಂದು ಅವಲೋಕನ

—ಡಾ॥ ಪುರುಷೋತ್ತಮ ಬಿಳಿಮಲೆ

ಒಂದು ಗೋಷ್ಠಿಯ ಆಶಯ ಭಾಷಣದ ಸ್ವರೂಪ ಏನೆಂಬುದು ನನಗೆ ಖಚಿತವಿಲ್ಲ. 'ನಿರ್ದಿಷ್ಟ ಗೋಷ್ಠಿಯೊಂದರಲ್ಲಿ ಮಂಡಿಸುವ ಪ್ರಬಂಧಗಳ ಮತ್ತು ಅನಂತರ ನಡೆಯುವ ಚರ್ಚೆಗೆ ದಿಕ್ಕು ತೋರಿಸುವ ಕೆಲಸವನ್ನು ಆಶಯ ಭಾಷಣ ಮಾಡಬೇಕು' ಎಂಬುದು ಪರಿಕಲ್ಪನಾತ್ಮಕ ಸತ್ಯ ಎಂದಾದರೆ ಅದಕ್ಕೆ ಪ್ರಾಯೋಗಿಕವಾಗಿ ಇಲ್ಲಿ ಅವಕಾಶಗಳಿಲ್ಲ. ಏಕೆಂದರೆ ಈ ಭಾಷಣ ನಿರೂಪಿತವಾಗುವ ಮುನ್ನವೇ ವಿದ್ವಾಂಸರು ತಮ್ಮ ಪ್ರಬಂಧಗಳನ್ನು ಸಿದ್ಧಗೊಳಿಸಿಕೊಂಡಿರುತ್ತಾರೆ ಮತ್ತು ಮುಂದಿನ ಚರ್ಚೆಗಳು ಆ ಪ್ರಬಂಧಗಳನ್ನೇ ನೆಮ್ಮಿಕೊಂಡು ಮುಂದುವರೆಯುತ್ತವೆ. ಈ ಕಾರಣದಿಂದಲೇ ನನ್ನ ಆಶಯ ಭಾಷಣಕ್ಕೆ ಒಟ್ಟು ಗೋಷ್ಠಿಯನ್ನು ಒಂದು ಗೊತ್ತಾದ ದಿಕ್ಕಿನತ್ತ ಚಲಿಸುವಂತೆ ಮಾಡುವ ಶಕ್ತಿ ಇಲ್ಲ ಎಂಬುದನ್ನು ಆರಂಭದಲ್ಲಿಯೇ ಒಪ್ಪಿಕೊಳ್ಳಬೇಕು. ಅವಕಾಶವಾದರೆ ಮುಂದೆ ನಡೆಯುವ ಚರ್ಚೆಯಲ್ಲಿ ಎತ್ತಿಕೊಳ್ಳಬಹುದಾದ ಕೆಲವು ಅಂಶಗಳನ್ನು ಮಾತ್ರ ಮುಂದಿಡುತ್ತಿದ್ದೇನೆ. ಇವು ಬೇರೆಯವರಿಗಾಗಿ ಸಿದ್ಧಪಡಿಸಿದ ಪ್ರಶ್ನೆಗಳಲ್ಲ. ನಮಗೆ ನಾವೇ ಧೈರ್ಯವಾಗಿ ಕೇಳಿಕೊಳ್ಳಬಹುದಾದದ್ದು.

ಇದೀಗ ಹತ್ತು ವರುಷಗಳನ್ನು ಪೂರೈಸಿದ ಬಂಡಾಯ ಸಾಹಿತ್ಯ ಪ್ರಕಾರಗಳ ವಸ್ತುನಿಷ್ಠ ಅಧ್ಯಯನಕ್ಕೆ ಬೇಕಾದ 'ದೂರ' (Distance) ಇನ್ನೂ ಏರ್ಪಟ್ಟಿಲ್ಲ. ಅಧ್ಯಯನಕಾರನಿಗೆ ಆ ಪ್ರಕಾರಗಳನ್ನು ಚಾರಿತ್ರಿಕವಾಗಿ ಗ್ರಹಿಸಿ, ಅದರ ವ್ಯಾಪಕತೆಯನ್ನು ತನ್ನ ತೆಕ್ಕೆಗೆ ಒಗ್ಗಿಸಿಕೊಳ್ಳಬಹುದಾದ ವಾತಾವರಣವೂ ಸಿದ್ಧವಾಗಿಲ್ಲ. ಈ ಸಾಹಿತ್ಯದ ಅವನತಿಯನ್ನು ಸೂಚಿಸುತ್ತ, ಇನ್ನೊಂದು ಮಾರ್ಗದ ರೂಪ-ಲಕ್ಷಣಗಳನ್ನು ಸಾಬೀತುಪಡಿಸುವ ಕೆಲಸ ಆಗುತ್ತಿಲ್ಲ. ಜೊತೆಗೆ ಇಲ್ಲಿ ಕೆಲಸ ಮಾಡುತ್ತಿರುವವರೆಲ್ಲರೂ ಇನ್ನು ತರುಣರು. ಇಂಥ ಕಾಲಘಟ್ಟದಲ್ಲಿ ನಮಗೆ ಖಚಿತವಾಗಿ ಮಾತಾಡಲು ಸಾಧ್ಯವಾಗುವುದು ನಮಗಿಂತ ಪೂರ್ವದ ನವ್ಯ ಸಾಹಿತ್ಯದ ಬಗ್ಗೆ ಮಾತ್ರ. ಏಕೆಂದರೆ ಹೊಸ ಸಾಹಿತ್ಯ ಪ್ರಕಾರದ ಹುಟ್ಟೇ ಹಳೆಯ ಸಾಹಿತ್ಯ ಪ್ರಕಾರಗಳ ಮೌನ ವಿಮರ್ಶೆಯಾಗಿಬಿಡುತ್ತದೆ. ಆದರೆ ಚಳುವಳಿಯೊಂದಿಗೇ ಸೇರಿಕೊಂಡಿರುವಾಗ 'ಸಮರ್ಥನೆ' ನಡೆವಷ್ಟು ತೀವ್ರವಾಗಿ ವಿಮರ್ಶೆ ನಡೆಯಲಾರದು. ಎಷ್ಟೋ ಬಾರಿ ನಮ್ಮ ಬಗ್ಗೆ ನಾವು ಎತ್ತಿಕೊಂಡಿರುವ ಪ್ರಶ್ನೆಗಳೂ ಸಹ, ಪರೋಕ್ಷವಾಗಿ ನಮ್ಮನ್ನು ಪರಿಷ್ಕರಿಸಿಕೊಂಡು, ಸಮರ್ಥಿಸುವುದಕ್ಕಾಗಿಯೇ ಹುಟ್ಟಿಕೊಂಡಿವೆ. ಇಂಥ

ಸಮರ್ಥನೆಗಳು ಚಾರಿತ್ರಿಕವಾಗಿ ಅನಿವಾರ್ಯವಾದುವು. ಹೀಗೆ ನೋಡಿದಾಗ ಸ್ಪಷ್ಟವಾಗುವುದು ಇಷ್ಟು: ಒಂದು ಹೊಸ ಸಾಹಿತ್ಯ ಚಳುವಳಿಯು ಅದರ ಹಿಂದಿನ ಸಾಹಿತ್ಯ ಪರಂಪರೆಯ ಬಗೆಗೆ ತಂದುಕೊಡಬಹುದಾದ ವಿಮರ್ಶನ ಪ್ರಜ್ಞೆಯನ್ನು ತನಗೇ ತಂದುಕೊಡದಿರುವುದರಿಂದ ಅಥವಾ ಕೊಟ್ಟುಕೊಳ್ಳಬಹುದಾದ ಶಕ್ತಿಯನ್ನು ನಾವು ಬೆಳೆಸಿಕೊಳ್ಳದಿರುವುದರಿಂದ, ಇಷ್ಟು ವರ್ಷಗಳಲ್ಲಿ ನಮಗೆ ಬಹುಮಟ್ಟಿಗೆ ಸಾಧ್ಯವಾದದ್ದು 'ಸಮರ್ಥನೆ' ಮಾತ್ರ. ಇದನ್ನು ಮೀರಲು ಮಾಡುವ ಪ್ರಯತ್ನ ನಮ್ಮನ್ನು ಮುಂದಕ್ಕೆ ಬೆಳೆಸೀತು.

ಈ ಗೋಷ್ಠಿಯಲ್ಲಿ ಕಾವ್ಯ, ಕತೆ–ಕಾದಂಬರಿ, ವಿಮರ್ಶೆ, ಮತ್ತು ಸಾಹಿತ್ಯ ವಿನ್ಯಾಸಕ್ಕೆ ಸಂಬಂಧಿಸಿದ ಹಾಗೆ ನಾಲ್ಕು ಪ್ರಬಂಧಗಳು ಮಂಡಿತವಾಗಲಿವೆ. ನಾಟಕವನ್ನು ಯಾಕೋ ಕೈಬಿಡಲಾಗಿದೆ. ಅದು ಇಲ್ಲಿ ಸೇರ್ಪಡೆಯಾಗಬೇಕಿತ್ತು. ಆಯಾ ಕ್ಷೇತ್ರದಲ್ಲಿ ತುಂಬ ಅಧಿಕೃತವಾಗಿ ಮತ್ತು ಜವಾಬ್ದಾರಿಯುತವಾಗಿ ಮಾತಾಡಬಲ್ಲ ಧೀಮಂತರು ಈ ಪ್ರಬಂಧಗಳನ್ನು ಸಿದ್ಧಪಡಿಸಿದ್ದಾರೆ. ಅವುಗಳ ಬಗ್ಗೆ ಇಲ್ಲಿ ಈಗ ಏನನ್ನಾದರೂ ಹೇಳಲಾಗದು, ಹೇಳಬಾರದು. ಹಾಗಾಗಿ ನಾನಿಲ್ಲಿ ಎತ್ತಿಕೊಳ್ಳಬಯಸುವ ಪ್ರಶ್ನೆಗಳು ಸ್ವಲ್ಪ ಬೇರೆ ಥರದ್ದು. ಸ್ಥೂಲವಾಗಿ ಅದು ಸಾಹಿತ್ಯದ ಕಾರ್ಯ (function)ಕ್ಕೆ ಸಂಬಂಧಿಸಿದ್ದು. ಬಂಡಾಯ ಸಂಘಟನೆಯ ಆರಂಭದಿಂದಲೂ ನಾವದಕ್ಕೆ ಒತ್ತು ಕೊಡುತ್ತಿದ್ದೇವೆ ಮಾತ್ರವಲ್ಲ ಬಂಡಾಯದ ಪ್ರಣಾಳಿಕೆಯಲ್ಲೂ ಅದನ್ನು ಮುಖ್ಯ ವಿಷಯವನ್ನಾಗಿ ಪರಿಗಣಿಸಿದ್ದೇವೆ. ಈ ಕಾರಣಕ್ಕೆ ಅದು ಇಲ್ಲಿ ಪ್ರಸ್ತುತ ಎಂದು ಭಾವಿಸಿದ್ದೇನೆ.

ಮಾರ್ಕ್ಸ್‌ವಾದ, ಲೋಹಿಯಾವಾದ, ಅಂಬೇಡ್ಕರ್‌ವಾದವೇ ಮೊದಲಾದ ವಿವಿಧ ಸಿದ್ಧಾಂತಗಳಿಂದ ಪ್ರೇರಣೆ ಪಡೆದ ನಾವು, ಇದುವರೆಗೆ ನಮಗೆ ಆಪ್ತವಾದ ಸಾಹಿತ್ಯವನ್ನು ನಿರ್ಮಿಸಿಕೊಂಡು ಬಂದಿದ್ದೇವೆ. ನಮ್ಮ ವೈಚಾರಿಕ ನೆಲೆಗಳನ್ನು ಸ್ಪಷ್ಟಪಡಿಸುತ್ತ, ಅದಕ್ಕೆ ಅಡ್ಡಿ ಉಂಟುಮಾಡುವ ವಿಷಯಗಳನ್ನೆಲ್ಲ ಖಾರವಾಗಿಯೇ ಖಂಡಿಸಿದ್ದೇವೆ. ಹೀಗೆ ಮಾಡುತ್ತಾ, ಮಾಡುತ್ತಾ, ಸಾಂಪ್ರದಾಯಿಕ ಸಮಾಜದಿಂದ ಬೇರ್ಪಟ್ಟಿದ್ದೇವೆ. ಯಾವ ಸಮಾಜವನ್ನು ನಾವು ನಮ್ಮ ಸಾಹಿತ್ಯದ ಮೂಲಕ ಮುಟ್ಟಬೇಕಾಗಿದೆಯೋ, ಯಾವ ಜನರಲ್ಲಿ ನಾವು ನಮ್ಮ ಕಲ್ಪನೆಯ ಕ್ರಾಂತಿಯ ಕನಸುಗಳ ಬೀಜವನ್ನು ಬಿತ್ತಬೇಕಾಗಿದೆಯೋ, ಆ ಜನರಿಂದ ನಾವು ನಮಗರಿವಿಲ್ಲದೆ ಪ್ರತ್ಯೇಕಿಸಲ್ಪಟ್ಟಿದ್ದೇವೆ. ಹಾಗೆ ಪ್ರತ್ಯೇಕಗೊಂಡದ್ದರಿಂದಲೇ ನಮ್ಮ ಅಸ್ತಿತ್ವವನ್ನು ರುಜುವಾತುಪಡಿಸಿಕೊಳ್ಳಲು ನಮಗೆ 'ಬಂಡಾಯ ಸಾಹಿತ್ಯ ಸಂಘಟನೆ' ಎಂಬೊಂದು ಪ್ರತ್ಯೇಕ ಘಟಕ ಬೇಕಾಯಿತು. ಪ್ರತ್ಯೇಕಿತ ವ್ಯಕ್ತಿತ್ವಗಳ ಸಾಂಸ್ಕೃತಿಕ ಹುಡುಕಾಟ (cultural identity)ವನ್ನು ನಿಯಮಬದ್ಧಗೊಳಿಸಿಕೊಂಡು ಅದನ್ನು ಸಮರ್ಥಿಸಿಕೊಳ್ಳಡಿದ್ದೇವೆ.

ಹೀಗೆ ಪ್ರತ್ಯೇಕಗೊಳ್ಳುತ್ತ ನಾವು ನಾವಾಗಿಯೇ ನೋವುಂಡವರ, ಕೆಳಗೆ ಬಿದ್ದವರ ಪರವಾಗಿ ಮಾತಾಡುವ ಹೊಣೆಯನ್ನು ಹೊತ್ತೆವು. ನಮ್ಮ ಸಾಹಿತ್ಯದ ವಿನ್ಯಾಸ ಹೀಗೆ ರೂಪುಗೊಳ್ಳುತ್ತಾ ಹೋಯಿತು. ರೂಪುಗೊಂಡ ಸಾಹಿತ್ಯ ಮತ್ತೆ ಅಕ್ಷರಸ್ಥರಿಗೇ ತಲುಪಬೇಕು ತಾನೇ? ಅನಕ್ಷರಸ್ಥರನ್ನೂ ಹಾಡಿನ ಮೂಲಕ, ನಾಟಕಗಳ ಮೂಲಕ ಮುಟ್ಟಲು ಪ್ರಯತ್ನಿಸಿರುವುದು ಹೌದಾದರೂ, ಒಟ್ಟಿಂದ ನಮ್ಮ ಗುರಿ ಅಕ್ಷರಸ್ಥರೇ ಆಗಿದ್ದಾರೆ. ಈ ಅಕ್ಷರಸ್ಥರಲ್ಲೂ ಸಾಹಿತ್ಯದ ಅಭ್ಯಾಸಿಗಳು ಕಡಮೆ. ನಮಗೆ ಸರ್ವಸ್ವವಾಗಿರುವ ಈ ಜನರನ್ನು ಮುಟ್ಟಲು ನಾವು ಸಾಕಷ್ಟು ಪ್ರಯತ್ನ ಮಾಡಿದ್ದೇವೆ. ಅಂದರೆ ಬಂಡಾಯದ ಬರಹಗಾರರಾದ ನಾವು ನಿಜವಾಗಿ ಯಾರಿಗೆ ಸ್ವರವಾಗಲು ಹೊರಟಿದ್ದೇವೆಯೋ, ಅವರಲ್ಲದ ಬೇರೊಂದು ವರ್ಗಕ್ಕೆ ಪ್ರತಿಭಟನೆಯನ್ನು ಸೃಜನಾತ್ಮಕವಾಗಿ ರವಾನಿಸಲು ನಿಂತವರಾಗಿದ್ದೇವೆ. ಹೀಗೆ ನೋಡಿದಾಗ ನಮ್ಮ ಸಾಹಿತ್ಯದ ಹುಟ್ಟಿನ ನೆಲೆಗಳು ಮತ್ತು ತಲುಪುವ ನೆಲೆಗಳು ಬೇರೆ ಬೇರೆಯಾಗಿರುವುದು ಮಾತ್ರವಲ್ಲ, ವಿರುದ್ಧವಾಗಿರುವುದು ಕಂಡು ಬರುತ್ತದೆ. ಡಾ. ಕೆ. ವಿ. ನಾರಾಯಣರು ಈ ಬಗ್ಗೆ ಈಗಾಗಲೇ ನಮ್ಮ ಗಮನ ಸೆಳೆದಿದ್ದಾರೆ. (ಶೂದ್ರ, ಸಂಪುಟ 14, ಸಂಚಿಕೆ 11, ಸೆಪ್ಟೆಂಬರ್ 88) ನಾವು ಯಾರ ಬಗ್ಗೆ ಮಾತಾಡುತ್ತೇವೆಯೋ, ಅವರ್‍ಯಾರಿಗೂ ನಮ್ಮ ಸಾಹಿತ್ಯ ಮುಟ್ಟುತ್ತಿಲ್ಲ. ಈ ಬಿರುಕನ್ನು ಮುಚ್ಚಲು ನಮ್ಮಲ್ಲಿ ಬಲಿಷ್ಠವಾದ ಕಾರ್ಯಕ್ರಮಗಳಿಲ್ಲ.

ಇದರಿಂದಾಗಿ ಜನರ ಬಗ್ಗೆಯೇ ಮಾತಾಡುವ ನಮಗೆ ಜನರೊಡನೆ ಸಂವಾದ ಸಾಧ್ಯವಾಗುತ್ತಿಲ್ಲ. ಬಹುಶಃ ಒಂದು ದೊಡ್ಡ ಕ್ರಾಂತಿಯ ಎಲ್ಲ ಸಾಧ್ಯತೆಗಳನ್ನು ಗಮನದಲ್ಲಿರಿಸಿಕೊಂಡು ನಾವು ಸಾಹಿತ್ಯದಲ್ಲಿ ಮಾತ್ರ ಕೆಲಸ ಮಾಡುತ್ತಿದ್ದೇವೆ ಎಂದು ತೋರುತ್ತದೆ. ಇತರ ಕ್ಷೇತ್ರಗಳೆಲ್ಲ ಮೌನವಾಗಿದ್ದಾಗ ಕೇವಲ ಸಾಹಿತ್ಯದ ಗುಟುರುಗಳು ಏನು ಮಾಡಿಯಾವು? ಗುಟುರುಗಳು ಸಹಾ ಜಡವಾಗಿ ಬಿಡುವ ಸಂದರ್ಭವದು. ಈ ಅರ್ಥದಲ್ಲಿ ಈಗ ಇರುವ ರೀತಿಯಲ್ಲಿಯೇ ಬಂಡಾಯ ಸಾಹಿತ್ಯವು ಮುಂದಕ್ಕೆ ಹೆಚ್ಚು ಬೆಳೆಯಲಾರದು. ಅದು ಮತ್ತೆ ಜನರೊಡನೆ ಸಂವಾದಕ್ಕೆ ಇಳಿಯುವ ಕೆಲಸವನ್ನು ಮಾಡಿ, ಅಲ್ಲಿಂದ ಮತ್ತೆ ಚೈತನ ಪಡೆಯಬೇಕಾಗಿದೆ.

ಸಾಹಿತ್ಯ ಪ್ರಕಾರಗಳ ಆಕೃತಿಗೆ ಸಂಬಂಧಿಸಿದಂತೆ ಇನ್ನೊಂದು ದೊಡ್ಡ ಸಮಸ್ಯೆ ಇದೆ. ನಮ್ಮ ಕಣ್ಣ ಮುಂದಿರುವ ಸಾಹಿತ್ಯದ ಆಕೃತಿಗಳು ಬಹುಮಟ್ಟಿಗೆ ನವ್ಯದವರಿಂದ ಸಿದ್ಧವಾದದ್ದು. ಸಣ್ಣ ಕತೆಯ ಕೇಂದ್ರೀಕೃತ ರಚನೆ, ಕಾದಂಬರಿಯ ಆದರ್ಶ ಮತ್ತು ವಾಸ್ತವಗಳ ಸಂಘರ್ಷ ಕಾವ್ಯದ ಅರ್ಥ ಶಕ್ತಿ ಮತ್ತು ನಾದ ಶಕ್ತಿ, ನಾಟಕಗಳ ಪಾತ್ರ ಪ್ರಪಂಚದಲ್ಲಿ ನಾವು ಗಮನಾರ್ಹ ಬದಲಾವಣೆಯನ್ನೇ ಮಾಡಿಕೊಂಡಿಲ್ಲ. ವಸ್ತುವಿನ ಬಗ್ಗೆ ನಾವು ಯೋಚಿಸಿದಷ್ಟು ಆಕೃತಿಯ ಬಗ್ಗೆ ಯೋಚಿಸಿಲ್ಲ.

ಹಾಗಾಗಿ ನಮ್ಮ ಅನೇಕರ ಒಳ್ಳೆಯ ಯೋಚನೆಗಳನ್ನು ಆಕೃತಿಯೇ ನುಂಗಿ ಹಾ ಬಿಟ್ಟಿದೆ. ಧರ್ಮ-ಕರ್ಮಗಳ ಸಂಯೋಗದಲ್ಲಿಯೇ ಬೆಳೆದು ಬಂದ ಕನ್ನಡ ಭಾ ಯನ್ನು ಪರಿಷ್ಕರಿಸಿಕೊಂಡಿಲ್ಲ. ದೇವನೂರರ 'ಒಡಲಾಳ', 'ಕುಸುಮ ಬಾಲೆ'ಗಳ ಅರವಿಂದ ಮಾಲಗತ್ತಿಯವರ 'ಕಾರ್ಯ' ಕೃತಿಗಳು ಅತ್ತ ಕಾದಂಬರಿಗಳೂ ಅಲ್ಲದೆ ಇತ್ತ ಸಣ್ಣ ಕತೆಗಳೂ ಅಲ್ಲದೆ ವಿಶಿಷ್ಟ ರಚನೆಗಳು. ಗದ್ಯ ಪದ್ಯ ಮಿಶ್ರಿತವಾದ ಕೆಲವ ಸಣ್ಣ ಕತೆಗಳೂ (ಉದಾ : ಶ್ರೀನಿವಾಸ ಹಕ್ಕಿಮರಿಯವರ 'ಹಕ್ಕಿಮರಿ' ಕತೆ, ಮಾ ಗತ್ತಿಯವರ 'ಅಹಿಂಸಾ ಚಪ್ಲಿ ಅಯ್ಯಪ್ಪ' ಕತೆ) ಪ್ರಕಟವಾಗಿವೆ. ಆಕೃತಿಯ ಬಗ್ಗೆ ಗಣ ನಮ್ಮ ಸಾಂಪ್ರದಾಯಿಕ ತಿಳುವಳಿಕೆಯನ್ನು ಈ ಕೃತಿಗಳು ಪ್ರಶ್ನಿಸುತ್ತವೆ ಮತ್ತು ಹೊಸ ಅಸ್ತಿತ್ವಕ್ಕೆ ತಡಕಾಡುತ್ತಿವೆ. ಇವು ಪ್ರತ್ಯೇಕ ಆಕೃತಿಯೊಂದರ ಆವಿರ್ಭಾವ ವನ್ನು ಸೂಚಿಸುತ್ತವೆಯೇ ? ಇದು ಹೌದಾದರೆ ಇದನ್ನು ಬಂಡಾಯ ಸಾಹಿತ್ಯದ ಗಟ್ಟಿ ಕೊಡುಗೆ ಎಂದು ಕೊಂಡಾಡಬಹುದು.

ಆಕೃತಿಯನ್ನು ಸ್ವೀಕರಿಸುವ ಓದುವ ವರ್ಗದ ಸಮಸ್ಯೆ ಬೇರೆ ತೆರನದ್ದು ನಮ್ಮ ಕುಂವೀಯವರು ಕೊಟ್ಟೂರಿನ ಪ್ರಾದೇಶಿಕ ಸತ್ವವನ್ನು ಸೂರೆಗೊಂಡಿದ್ದಾರೆ. ಅರವಿಂದರು ಮಂಚಗಾರ ಜನಾಂಗದ ಜೀವನ ಸರ್ವಸ್ವವನ್ನು ದಾಖಲಿಸಿದ್ದಾರೆ. ದೇವನೂರು, ಮುಳ್ಳೂರು ನಾಗರಾಜರು ಮೈಸೂರು ಪರಿಸರದ ದಲಿತರ ಆಡುನುಡಿ ಯನ್ನು ಕೊಳ್ಳೆ ಹೊಡೆದಿದ್ದಾರೆ. ಈ ಬರಹಗಳನ್ನು ಓದುವ ವಿದ್ಯಾವಂತ ಸಾಹಿತಿ ವರ್ಗ, ಅಂದರೆ ನಾವು ಕನ್ನಡದ ಇತರ ಕೃತಿಗಳನ್ನೂ ಓದುವುದರ ಮೂಲಕ ಕನ್ನಡದ ಒಂದು ಸಿದ್ಧರೂಪವನ್ನು ಮನಸ್ಸಿನಲ್ಲಿ ದಾಖಲಿಸಿಕೊಂಡಿರುತ್ತೇವೆ. ನಮ್ಮ ಮನಸ್ಸಿನ ಈ ಭಾಷಿಕ ರಚನೆಗೂ, ದೇವನೂರರೇ ಮೊದಲಾದ ಮುಖ್ಯ ಬರಹಗಾರರ ಭಾಷಿಕ ರಚನೆಗೂ, ಸಮನ್ವಯ ಏರ್ಪಡುವುದೋ, ಸಂಘರ್ಷ ಏರ್ಪಡುವುದೋ ಎಂಬ ಬಗ್ಗೆ ನಾವು ಚರ್ಚೆ ನಡೆಸಿಲ್ಲ. ನಮ್ಮ ಭಾಷಿಕ ರಚನೆಗೆ ಬರಹಗಾರರು ಹೊಂದಿಕೊಳ್ಳುತ್ತಾ ಹೋದರೆ, ಆಗ ಅವರ ಬರಹದ ಸತ್ವ ಸೋರಿ ಹೋಗುತ್ತದೆ. ಹೊಂದಿಕೊಳ್ಳದೇ ಹೋದರೆ ಅವರು ಏನು ಬರೆದಿದ್ದಾರೋ ಅದು ಸಂವಹನವಾಗುವುದಿಲ್ಲ. ಈ ನಿಟ್ಟಿ ನಲ್ಲಿ ಬಂಡಾಯ ಸಾಹಿತ್ಯವು ಒಳಗೊಳ್ಳಬೇಕಾದ ಕನ್ನಡದ ಕುರಿತೇ ನಾವು ದೀರ್ಘ ವಾಗಿ ಮತ್ತು ಇನ್ನಷ್ಟು ಸೂಕ್ಷ್ಮವಾಗಿ ಚಿಂತಿಸಬೇಕಾಗಿದೆ.

ಮಹಿಳೆಯರಿಗೆ ಈ ಸಮಸ್ಯೆ ಇನ್ನಷ್ಟು ಭೀಕರ. ಅವರ ಮುಂದಿರುವ ಭಾಷಿಕ ರಚನೆಗಳು ಪುರುಷ ಲಯದ್ದು ಅಥವಾ ಅದನ್ನು ಒಳಗೊಂಡ ನಾಗರಿಕ ಲಯದ್ದು. ವೀಣಾ ಮತ್ತು ಸರ್ವಮಂಗಳಾ ಅವರನ್ನೂ ಹೊರತುಪಡಿಸಿದರೆ ಉಳಿದ ಎಲ್ಲ ಮಹಿಳೆಯರೂ ಪುರುಷರ ಭಾಷಿಕ ವಿನ್ಯಾಸದಲ್ಲೇ ಬರೆಯುತ್ತಿದ್ದಾರೆ, ಇಂಥ ಕಡೆ ಅಸಾಮಾನ್ಯ ಕೃತಿಗಳು ಹುಟ್ಟುವುದು ಕಷ್ಟ.

ಬಂಡಾಯ ಸಾಹಿತ್ಯವು ಜನಪ್ರಿಯವಾಗುತ್ತಿದ್ದಂತೆ ಅದಕ್ಕೆ ತಕ್ಕವುಟ್ಟಿನ ಅಂತಾರಾಷ್ಟ್ರೀಯ ಪ್ರಜ್ಞೆ ಬಂದು ಬಿಟ್ಟಿದೆ. ಮುಖ್ಯವಾಗಿ ಮಾರ್ಕ್ಸ್‌ವಾದ ನಮ್ಮ ಪ್ರಜ್ಞೆಯನ್ನು ವಿಶ್ವ ಪ್ರಜ್ಞೆಯನ್ನಾಗಿ ಹಿಗ್ಗಲಿಸಿದೆ. ಹೀಗಾದಾಗ ಉಂಟಾಗುವ ಸಮಸ್ಯೆಯೊಂದನ್ನು ಡಾ. ರಹಮತ್ ತರೀಕೆರೆಯವರು ಸೂಚ್ಯವಾಗಿ ಗುರುತಿಸಿದ್ದಾರೆ. ಅವರ ಮಾತುಗಳು ಇಂತಿವೆ: "ಈ ವಿಶ್ವಪ್ರಜ್ಞೆಯ ಆಯಾಮಗಳು ಸ್ಥಳೀಯ ಸಮಸ್ಯೆಗಳನ್ನು ಕುರಿತು ಕೆಲಮಟ್ಟಿನ ಅವಜ್ಞೆಯೆನಿಸುವಷ್ಟು ಅತಿವ್ಯಾಪ್ತಿಯನ್ನು ಪಡೆಯುತ್ತೇವೆಯೋ ಎಂಬುದು. ಹೀಗಾಗದಂತೆ ಹಾಗೂ ನಗರ ಕಾರ್ಮಿಕ ಶ್ರದ್ಧೆಯಷ್ಟೇ ಭಾರತದ ಗ್ರಾಮೀಣ ದಯನೀಯ ಪ್ರಪಂಚದ ತಿಳುವಳಿಕೆ ಕಡಿಮೆಯಾಗದಂತೆ ಕೂಡಾ ಅದು ನೋಡಿಕೊಳ್ಳಬೇಕಿದೆ. ಬರಗೂರರಂಥವರಲ್ಲಿ ಈ ಗುಣಕ್ಕೆ ಚ್ಯುತಿಯಿಲ್ಲ' '(ಅನ್ವೇಷಣೆ' ಸಂಚಿಕೆ 34, ಸೆಪ್ಟೆಂಬರ್-ಅಕ್ಟೋಬರ್ 1989 ; 41) ಇದು ಬಂಡಾಯ ಸಾಹಿತ್ಯದ ಸೃಜನಶೀಲ ನೆಲೆಗಳಿಗೂ, ಸಾಹಿತ್ಯದ ವಿನ್ಯಾಸಕ್ಕೂ ಸಂಬಂಧಿಸಿದ ಗುಮಾನಿಯಾಗಿದೆ. ನಾವು ಸ್ಥಳೀಯ ವಿಷಯಗಳಿಂದ ವಿಶ್ವಪ್ರಜ್ಞೆಯತ್ತ ಸಾಗುತ್ತಿದ್ದೇವೆಯೋ ಎಂದು ಕೇಳಿದರೆ, ಎರಡನೆಯದನ್ನೇ ಮಾಡುತ್ತಿದ್ದೇವೆ. ಆದರೆ ಆಗಬೇಕಾದ್ದು ಮೊದಲನೆಯದು. ಈ ಬಗ್ಗೆ ಮಾರ್ಕ್ಸ್ ಮತ್ತು ಲೆನಿನ್ ಅವರು ಬಹಳ ಖಚಿತವಾದ ಅಭಿಪ್ರಾಯಗಳನ್ನು ನೀಡಿದರೂ, ನಾವು ಅದನ್ನು ತಪ್ಪಾಗಿ ಗ್ರಹಿಸಿದ್ದೇವೆ. ನಮಗೆ ಸಮಸ್ಯೆಗಳನ್ನು ಆದಷ್ಟು ಬೇಗ ಜನರಲೈಸ್ ಮಾಡುವ ತವಕ. ಆಧುನಿಕ ಯುಗದ ಲಕ್ಷಣಕ್ಕೆ ಅನುಗುಣವಾಗಿ ಎಲ್ಲವನ್ನು ವರ್ಗೀಕರಿಸುವ ಹಠ. ವಿಶ್ವದ ಮೂಸೆಯಲ್ಲೇ ವಿಶ್ಲೇಷಣೆ ಮಾಡುವ ಹುಮ್ಮಸ್ಸು. ಹೀಗೆ ಮಾಡುವುದರಿಂದಾಗಿ ನಾವು ಯಾರಿಗೆ ದನಿಯಾಗಿದ್ದೇವೆಯೋ ಆ ಜನಗಳ ಸಾಂಸ್ಕೃತಿಕ ಅನನ್ಯತೆಯನ್ನು ಆದಷ್ಟು ಸೂಕ್ಷ್ಮವಾಗಿ ಪರಿಶೀಲಿಸುವ ಅವಕಾಶದಿಂದ ವಂಚಿತರಾಗುತ್ತಿದ್ದೇವೆ. ಈ ವಿಷಯದಲ್ಲಿ ನಾವು ಚರಿತ್ರೆಯಿಂದ ಪಾಠವನ್ನೂ ಕಲಿಯಬೇಕಾಗಿದೆ. 19ನೇಯ ಶತಮಾನದಲ್ಲಿ ಕರಾವಳಿಗೆ ಬಂದ ಕ್ರೈಸ್ತ ಮಿಶನರಿಗಳಿಗೆ ತುಳುನಾಡಿನ ಭೂತಗಳೊಳಗೆ ಪ್ರವೇಶ ಮಾಡಲು ಸಾಧ್ಯವೇ ಆಗಲಿಲ್ಲ. 'ಸೈತಾನ' ಎಂದೆಲ್ಲಾ ಹೇಳಿ ಭೂತಾರಾಧನೆಯನ್ನು ಯೂನಿವರ್ಸಲ್ ಮಾಡಲು ಪ್ರಯತ್ನಿಸಿ ವಿಫಲರಾದರು. ಇದು ಸಾಂಸ್ಕೃತಿಕ ಅಂಶವೊಂದು ಗಾಢವಾಗಿ ಸ್ಥಳೀಕರಣ (localisation) ಗೊಂಡದ್ದರ ಫಲ. ನಮ್ಮ ದಲಿತರ ಸಮಸ್ಯೆಗಳೂ ಹೀಗೆ ಸ್ಥಳೀಕರಣಗೊಂಡ ಬಗೆಯನ್ನು ನಾನು ಬೇರೊಂದೆಡೆಯಲ್ಲಿ ಚರ್ಚಿಸಿದ್ದೇನೆ. (ದಲಿತ ಜಗತ್ತು, 1989 : 45) ಈ ನಿಟ್ಟಿನಲ್ಲಿ ನೋಡಿದಾಗ ವಾಲೀಕಾರ, ಸಬರದ, ಮುಳ್ಳೂರು, ದೇವನೂರು, ಮಾಲಗತ್ತಿ ಮೊದಲಾದವರ ಪ್ರಯತ್ನಗಳಿಗೆ ಗೌರವ ಸಲ್ಲಬೇಕಾಗುತ್ತದೆ.

ಕೊನೆಯದಾಗಿ ಇನ್ನೊಂದು ಸಮಸ್ಯೆ : ಬಂಡಾಯ ಸಾಹಿತ್ಯವು ಇಡಿಯಾಗಿ ಜನಪರವಾಗಿ ಬೆಳೆದಿದೆ. ಪ್ರತಿಭಟನೆ, ಅಸಮಾಧಾನಗಳೇ ಅವರ ಮುಖ್ಯ ತಾತ್ತ್ವಿಕ ಕಾಳಜಿಯಾಗಿದೆ. ಬಂಡಾಯದ ಪ್ರತಿಯೊಬ್ಬ ಬರಹಗಾರನೂ ವ್ಯವಸ್ಥೆಯ ಬಗೆಗಣ ತನ್ನ ಅಸಮಾಧಾನವನ್ನು ಬರೆಹದ ಮೂಲಕ ಸಮರ್ಥವಾಗಿ ಅಭಿವ್ಯಕ್ತಿಸಿದ್ದಾನೆ. ಹೀಗೆ ಅಭಿವ್ಯಕ್ತಿಯಾದಾಗ ನಮ್ಮ ಅಸಮಾಧಾನ, ರೋಷಗಳೆಲ್ಲವೂ ಮಾನಸಿಕವಾಗಿ ನಿರಸನ ಹೊಂದುತ್ತವೆ. ಹೀಗೆ ನಿರಸನ ಹೊಂದಿದ ಬರಹಗಾರ ಅನಂತರದ ಸಾಮಾಜಿಕ ಕ್ರಿಯೆಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳುವ ಸಾಧ್ಯತೆಗಳೇ ಕಡಿಮೆ. ಆದರೆ ಬರಹಗಾರ ಕ್ರಿಯಾಶೀಲ (activist) ಆಗುವುದಿಲ್ಲ. ನಮ್ಮ ಬರೆಹದ ಕ್ರಮಗಳೇ ನಮ್ಮ ಸಿಟ್ಟನ್ನು ಕೊನೆಗಾಣಿಸಿ ಬಿಟ್ಟರೆ. ಉಳಿವುದು ತಾಳ್ಮೆ—ಸಮಾಧಾನಗಳು ಮಾತ್ರ. ಈ ಅಂಶಗಳು ನಾವು ಯಾವ ಸಮಾಜವನ್ನು ವಿರೋಧಿಸುತ್ತೇವೆಯೋ, ಆ ಜನವಿರೋಧಿ ಸಮಾಜವೇ ಯಶಸ್ವಿಯಾಗಿ ಮುಂದುವರೆದುಕೊಂಡು ಬರಲು ಹೆಚ್ಚು ಸಹಾಯ ಮಾಡುತ್ತವೆ. ಎಲ್ಲಿಯವರೆಗೆ ಬರಹಗಾರನು ಸಾಮಾಜಿಕವಾಗಿ ಮತ್ತು ಅಂತಿಮವಾಗಿ ರಾಜಕೀಯವಾಗಿಯೂ ಕ್ರಿಯಾಶೀಲನಾಗುವುದಿಲ್ಲವೋ, ಅಲ್ಲಿಯವರೆಗೆ ಆತನ ಸಿಟ್ಟು ಮತ್ತು ರೋಷಗಳು ಪರೋಕ್ಷವಾಗಿ ವ್ಯವಸ್ಥೆಯನ್ನು ಮುಂದುವರೆಸಿಕೊಂಡು ಬರುವ ಅಸ್ತ್ರಗಳಾಗಿ ಮಾರ್ಪಡುತ್ತವೆ. ಮೂರನೇ ಜಗತ್ತಿನ ಹಲವು ಕಡೆ ನಡೆಯುವ ಬಂಡಾಯಗಳಲ್ಲಿ ಬರಹಗಾರರು ಈ ಮಿತಿಯನ್ನೂ ಮೀರಿದ್ದಾರೆ. ಪ್ಯಾಲೆಸ್ಟೈನ್, ಬಲೂಚಿಸ್ಥಾನ, ಕರಾಚಿ, ನಿಕರಗುವಾ, ಸಾಲ್ವಡೋರ್ ಮೊದಲಾದೆಡೆಗಳಲ್ಲಿ ಕಾವ್ಯ ಬರೆವ ಕೈಗಳು ಬಂದೂಕು ಹಿಡಿದಿವೆ. ಹಾಗಾಗಿ ಅಲ್ಲಿನ 'ಜೈಲು ದಿನಚರಿಗಳೇ' ಅತ್ಯುತ್ತಮ ಬಂಡಾಯ ಸಾಹಿತ್ಯ ಪ್ರಕಾರಗಳಾಗಿವೆ. ಮಹಿಳೆಯರೂ ಗೆರಿಲ್ಲಾ ಹೋರಾಟದ ಮುಂಚೂಣಿಯಲ್ಲಿದ್ದಾರೆ. ಗ್ಯೂಲೆನ್, ಡಾರ್ಪಮೆನ್, ಪೋವಿ, ವಾತಿಂಗೋ, ರೆಬೆಲ್, ಬೋರ್ಜೆ....ಮೊದಲಾದವರು ಸಮಕಾಲೀನ ಜಗತ್ತಿನ ಅತಿಶ್ರೇಷ್ಠ ಸಾಹಿತಿಗಳೇನಲ್ಲ. ಆದರೆ ಬಂಡಾಯದ ಅತಿಶ್ರೇಷ್ಠ ಬರಹಗಾರರು. ಅಕ್ಷರ ಮತ್ತು ಹೋರಾಟ ಸಮನ್ವಯಗೊಂಡದ್ದಕ್ಕೆ ಅವರ ಬರವಣಿಗೆಗಳು ಸಾಕ್ಷಿ. ನಮ್ಮಲ್ಲಿ ಅಂಥ ಹೋರಾಟವೂ ಇಲ್ಲ. ಬರಹವೂ ಇಲ್ಲ. ಯಾವ ಸಾಹಿತಿಯೂ ಜೈಲಿನಲ್ಲಿ ಕುಳಿತು ದಿನಚರಿ ಬರೆಯುತ್ತಿಲ್ಲ. ನಾವು ಇಂಥ ಕ್ಷೇಮಂಕರ ವಾತಾವರಣದಲ್ಲಿ ಇರುತ್ತಾ ನಿರುಪದ್ರವಿಗಳಾದುದರಿಂದಲೇ ನಮ್ಮನ್ನು ಹತ್ತು ವರುಷಗಳ ಅನಂತರ ಸಾಹಿತ್ಯ ಪರಿಷತ್ತು ಆಹ್ವಾನಿಸುತ್ತದೆ, ಅಕಾಡೆಮಿಗಳು ಸದಸ್ಯರಿಗೆ ಜಾಗ ತೆರವು ಮಾಡುತ್ತವೆ, ಸರಕಾರವೂ ಶಾಸಕ ಪದವಿ ಕೊಟ್ಟು ಗೌರವಿಸುತ್ತದೆ.

ಇದುವರೆಗಿನ ನನ್ನ ಚರ್ಚೆಯನ್ನು ಸಂಕ್ಷೇಪಿಸುವುದಾದರೆ—

1. ಬಂಡಾಯ ಸಾಹಿತ್ಯ ವಿಮರ್ಶೆಗೆ ಅಗತ್ಯವಾದ 'ದೂರ' ನಮಗಿನ್ನೂ ಸಿದ್ಧಿ

ಸಿಲ್ಲವಾದ್ದರಿಂದ ನಮ್ಮ ವಿಮರ್ಶೆಗಳು ಅಂತಿಮವಾಗಿ ಸಮರ್ಥನೆಗಳಾಗಿ ಮಾರ್ಪಡುತ್ತಲಿವೆ.

2. ನಮ್ಮ ಸಾಹಿತ್ಯದ ಹುಟ್ಟಿನ ನೆಲೆ ಮತ್ತು ತಲುಪುವ ನೆಲೆಗಳು ಎದುರುಬದುರಾಗಿರುವುದರಿಂದ ಜನರೊಡನೆ ಅರ್ಥಪೂರ್ಣವಾದ ಸಂವಾದ ನಡೆಸಲು ನಮಗೆ ಸಾಧ್ಯವಾಗುತ್ತಿಲ್ಲ. ಜೊತೆಗೆ ನಮಗೆ ಅರಿವಿಲ್ಲದಂತೆ ಜನರಿಂದ ನಾವು ಪ್ರತ್ಯೇಕಿಸಿಕೊಂಡಿದ್ದೇವೆ.

3. ಹೊಸ ಆಕೃತಿಗಳಿಗಾಗಿ ನಾವು ತಡಕಾಡಿಲ್ಲ. ಹಳೆಯ ಆಕೃತಿಗಳಲ್ಲಿ ನಮ್ಮ ವಸ್ತುವನ್ನು ತುಂಬಿಸುವುದರಿಂದ ವಸ್ತುವಿನ ಅನನ್ಯತೆಗೆ ಭಂಗ ಬಂದಿದೆ. ದಲಿತ ಬರಹಗಾರರ ಪ್ರಯತ್ನ ಈ ನಿಟ್ಟಿನಲ್ಲಿ ಕುತೂಹಲಕರವಾದುದು.

4. ಭಾಷಿಕ ರಚನೆಗಳನ್ನು ನಾವು ಅಷ್ಟಾಗಿ ಗಮನಿಸಿಲ್ಲವಾದ್ದರಿಂದ ಭಾಷೆಯೂ ನಮಗೆ ತೊಡಕಾಗಿ ಪರಿಣಮಿಸಿದೆ.

5. ಸ್ಥಳೀಯ ಸಮಸ್ಯೆಗಳಿಂದ ವಿಶ್ವಪ್ರಜ್ಞೆ ಮೂಡಿಸಿಕೊಳ್ಳಬೇಕಾಗಿದ್ದ ನಾವು ವಿಶ್ವ ಪ್ರಜ್ಞೆಯಿಂದ ಸ್ಥಳೀಯ ಸಮಸ್ಯೆಗಳಿಗೆ ಬರುತ್ತಿದ್ದೇವೆ. ಇದರಿಂದ ನಮ್ಮ ಸಾಂಸ್ಕೃತಿಕ ನೆಲೆಗಳನ್ನು ನಾವು ಸರಳಗೊಳಿಸುತ್ತಿದ್ದೇವೆ.

6. ಬಂಡಾಯ ಸಾಹಿತಿಗಳು ಸಾಮಾಜಿಕವಾಗಿಯೂ ಸಾಕಷ್ಟು ಕ್ರಿಯಾಶೀಲರಾಗದೇ ಇರುವುದರಿಂದ ಅವರ ಬರಹಗಳು ಪ್ರತಿಭಟನಾ ನಿರಸನಕ್ಕೆ ಕಾರಣವಾಗಿ, ಆಳುವ ವರ್ಗದ ಪ್ರೀತಿಯನ್ನು ಗಳಿಸಿಕೊಂಡಿದೆ.

ಈ ಮಿತಿಗಳನ್ನು ಮೀರಲು ನಾವು ಮಾಡುವ ಪ್ರಯತ್ನಗಳೇ ಮುಂದಿನ ದಿನಗಳಲ್ಲಿ ನಮ್ಮನ್ನು ಬದುಕಿಸೀತು.

(೧ ಜುಲೈ ೯೦ ರಂದು ಬೆಂಗಳೂರಿನ ಸಾಹಿತ್ಯ ಪರಿಷತ್‌ನಲ್ಲಿ ನಡೆದ 'ಬಂಡಾಯ ಸಾಹಿತ್ಯ ಸಮಾವೇಶ'ದ ಸಂದರ್ಭದಲ್ಲಿನ ವಿಚಾರ ಸಂಕಿರಣದ ಆಶಯ ಭಾಷಣ.)

---

ವಿಮರ್ಶೆ ವ್ಯಕ್ತಿನಿಷ್ಠ ನಿಲುವುಗಳಿಂದ ಮಾತ್ರವಲ್ಲ, ವರ್ಗನಿಷ್ಠ ನಿಲುವುಗಳಿಂದಲೂ ನಿಷ್ಪಕ್ಷಪಾತತೆಯನ್ನು ಕಳೆದುಕೊಳ್ಳುತ್ತಿದೆ. ಬೇಂದ್ರೆ, ಅಡಿಗರ ಬಗೆಗೆ ಬರೆಯುವವರು ಕುವೆಂಪು ಕುರಿತು ತಾಳುವ ನಿಲುವನ್ನೂ, ಕುವೆಂಪು ವಿಮರ್ಶಕರು ಬೇಂದ್ರೆ ಬಗೆಗೆ ಮೌನವಾಗಿರುವುದನ್ನು ಗಮನಿಸಬೇಕು. ವಿಮರ್ಶೆ ಆಯಾ ಪಂಥಗಳ ವಕೀಲಿ ಮಾಡುತ್ತಿರುವುದೂ ಕಣ್ಣೆದುರು ಇದೆ. ಪರಂಪರೆಯ ಗೌರವದೊಂದಿಗೆ ವರ್ತಮಾನದ ಪ್ರೀತಿಯೂ ಸೇರಿ ವಿಮರ್ಶೆ ನಿಷ್ಠುರವಾಗಬೇಕು. ಪ್ರೀತಿಯೇ ಇಲ್ಲದೆ ನಿಷ್ಠುರತೆಯಿದ್ದಾಗ ಅದು ಇತ್ಯಾತ್ಮಕವಾಗಿರುವುದು ಸಾಧ್ಯವಿಲ್ಲ. ಯಾವುದೇ ಕಾವ್ಯದ ಸಾಮಾಜಿಕ ಧೋರಣೆಯ ಭಿನ್ನಾಭಿಪ್ರಾಯವಿದ್ದಾಗಲೂ ಅಲ್ಲಿನ ಕಾವ್ಯದ ಉತ್ತಮಿಕೆಯನ್ನು, ಕನ್ನಡಕ್ಕೆ ಅದರ ಕೊಡುಗೆಯನ್ನು ಗುರುತಿಸುವ ವಿಮರ್ಶೆಯು ಹೆಚ್ಚಾಗಬೇಕು. ಸಾಮಾಜಿಕ ನಿಲುವಿನ ಕಾರಣದಿಂದ ಹುಟ್ಟುವ ವಿರಸಗಳು, ಶುದ್ಧ ಸಾಹಿತ್ಯದ ಹಠಕ್ಕೆ ಕರೆದೊಯ್ಯುತ್ತವೆ ಮತ್ತು ಆ ಹಿಂದೆ ವಿಚಿತ್ರವಾದ ಸಂಕೀರ್ಣತೆಗಳು ಕೆಲಸ ಮಾಡುತ್ತಿರುತ್ತವೆ.

—ಡಾ॥ ರಹಮತ್ ತರೀಕೆರೆ

---

# ಮರಾಠಿ ದಲಿತ ಸಾಹಿತ್ಯ

—ಸರಜೂ ಕಾಟ್ಕರ್

ಜಗತ್ತಿನ ಎಲ್ಲ ಸಾಹಿತ್ಯದ ಪ್ರಾಕಾರಗಳಲ್ಲೂ ನಾವು ಒಂದಿಲ್ಲೊಂದು ರೀತಿಯ ಪ್ರತಿಭಟನೆಯನ್ನು ಕಾಣಬಹುದು. ಈ ಪ್ರತಿಭಟನೆ ಒಂದೊಂದು ಸಲ ಹಲ-ಕೆಲ ವರಿಗೆ ಕಿರಿಕಿರಿಯನ್ನುಂಟು ಮಾಡಿದರೂ, ಸಾಹಿತ್ಯದಲ್ಲಿ ಇದು ಅನಿವಾರ್ಯ ಕ್ರಿಯೆ. ಯಾವದೇ ಸಾಹಿತ್ಯ ಒಂದೇ ಕಡೆಗೆ ನಿಂತ ನೀರಾಗುವ ಸಾಧ್ಯತೆಗಳಿದ್ದಾಗ, ಆ ಸಾಹಿತ್ಯಕ್ಕೆ ಆಗಾಗ ಬದಲಾವಣೆಯ ಮೆರುಗು ಬೇಕಾಗುತ್ತದೆ. ಈ ಮೆರುಗು ಇಲ್ಲ ದಿದ್ದರೆ ಸಾಹಿತ್ಯಲೋಕ ನಾರುವ ಕೆಟ್ಟ ನರಕವಾಗುತ್ತಿತ್ತು.

ಪ್ರತಿಭಟನೆಯ ಈ ಕಲ್ಪನೆಯನ್ನು ನಾವು ಅನೇಕಾನೇಕ ರೀತಿಯಲ್ಲಿ ಅರ್ಥೈಸ ಬಹುದು. ತನಗೆ ಅನ್ನಿಸಿದ್ದನ್ನು ಮಂಡಿಸುತ್ತ ಅದೇ ಕಾಲಕ್ಕೆ ತನಗೆ ಒಪ್ಪಿಗೆಯಾಗ ದಿರುವ ವಿಷಯದ ಬಗ್ಗೆ ವಿರೋಧಿಸುವ ಕ್ರಿಯೆಯೇ ಪ್ರತಿಭಟನೆ. ಒಬ್ಬ ಗುಲಾಮ ತನ್ನ ಒಡೆಯನ ವಿರುದ್ಧ ಬಂಡೇಳುತ್ತಾನೆ-ಇದು ಒಂದು ರೀತಿಯ ಪ್ರತಿಭಟನೆ. ಈ ಬಂಡೇಳುವುದನ್ನೇ ಆತ ಅಕ್ಷರಗಳಲ್ಲಿ ನಮೂದಿಸಿದರೆ, ಅದೇ ಪ್ರತಿಭಟನೆ ಸಾಹಿತ್ಯ ವಾಗುತ್ತದೆ. ಪ್ರತಿಭಟನೆ ಮೂಲಭೂತವಾಗಿ ಸಾಮಾಜಿಕವಾಗಿದ್ದಂತೆಯೇ ರಾಜ ಕೀಯ ಸಂಬಂಧಿ ಸ್ವರೂಪವೂ ಆಗಿರಬಹುದು. ಪ್ರತಿಭಟನೆ ಕೇವಲ ಗುಲಾಮ— ಒಡೆಯನ ಸಂಬಂಧಕ್ಕೆ ಮಾತ್ರ ಸೀಮಿತವಾದುದಲ್ಲ. ತನ್ನ ಪರಿಸರದ ವಿರುದ್ಧ ಬದುಕಿನ ವೈರುಧ್ಯ ವೈಚಿತ್ರ್ಯಗಳ ಬಗ್ಗೆ ಹಾಗೂ ಮಾನವೀಯ ಸಂಬಂಧಗಳ ಸ್ಥಾಪನೆ ಗಾಗಿ ನಡೆಸುವ ಹೋರಾಟಗಳೂ ಈ ಪ್ರತಿಭಟನೆಯ ಪರಿಮಿತಿಯಲ್ಲಿಯೇ ಬರುತ್ತವೆ. ಪ್ರತಿಭಟನೆ ಅಕ್ಷರಕ್ಕೆ ಇಳಿದಾಗ ಆ ಸಾಹಿತ್ಯ ತತ್ಕಾಲೀನ ಪರಿಸ್ಥಿತಿಗೆ ಒಂದು ರೀತಿ ಯಲ್ಲಿ ಶಾಕ್ ನೀಡಿದಂತಾಗುತ್ತದೆ.

ಪ್ರತಿಭಟನೆ ಮನುಷ್ಯನ ಮೂಲ ಸ್ವಭಾವಗಳಲ್ಲಿ ಒಂದು. ಮನುಷ್ಯನ ಪ್ರಜ್ಞೆಗೆ ಅಥವಾ ಅವನ ಅಸ್ಮಿತೆಗೆ ಅಪಮಾನವಾದಾಗ, ಆತ ಸಿಡಿದೇಳುವುದು ಸಹಜ. ಈ ಸಿಡಿದೇಳುವ ಕ್ರಿಯೆ ಒಂದೊಂದು ಸಲ ಅನೇಕಾನೇಕ ವರ್ಷಗಳ ಕಾಲಾವಧಿ ಯನ್ನು ತೆಗೆದುಕೊಂಡಿರುವದು ಇತಿಹಾಸ ಗುರುತಿಸಿರುವ ಕರಾಳ ಸತ್ಯ. ಅನ್ಯಾಯ ಅತ್ಯಾಚಾರಗಳು ಸಹನಾತೀತವಾದಾಗ, ಅವುಗಳಿಗೆ ಧ್ವನಿ ಮೂಡುತ್ತವೆ. ಈ ಧ್ವನಿಗೆ ಅಕ್ಷರಗಳ ಪರಿಚಯವಿದ್ದರೆ ಅವು ಸಾಹಿತ್ಯಿಕರೂಪದಲ್ಲಿ ಅಂದರೆ ಪುಸ್ತಕವೋ ಸಂಕಲ ನವೋಗಳ ರೂಪದಲ್ಲಿ ಬರುತ್ತವೆ. ಧ್ವನಿಗಳಿಗೆ ಅಕ್ಷರಗಳು ಗೊತ್ತಿಲ್ಲದಿದ್ದರೆ ಅವು ಸೀಮಿತ ರೀತಿಯಲ್ಲಿ ಅಲ್ಲಲ್ಲೇ ಬಾಯಿಂದ ಬಾಯಿಗೆ ಸುತ್ತುತ್ತವೆ.

ಈ ಹಿನ್ನೆಲೆಯಲ್ಲಿ ನಾವು ಮರಾಠಿಯ ದಲಿತ ಸಾಹಿತ್ಯವನ್ನು ನೋಡಿದಾಗ, ಅದಕ್ಕಿರುವ ತೀಕ್ಷ್ಣತೆ, ಸಂವೇದನಾಶೀಲತೆ ಭಾರತೀಯ ಉಳಿದೆಲ್ಲ ಭಾಷೆಗಳಲ್ಲಿರುವ ದಲಿತ ಸಾಹಿತ್ಯಕ್ಕಿಂತಲೂ ಹೆಚ್ಚು ಪ್ರಬಲವಾದುದು. ಒಂದೇ ರೀತಿಯಲ್ಲಿ ಮರಾಠಿಯ ದಲಿತ ಸಾಹಿತ್ಯ ನಿಗ್ರೋ ಸಾಹಿತ್ಯದಷ್ಟೇ ತೀಕ್ಷ್ಣವಾದುದ್ದಾಗಿದೆ. ಅನೇಕ ಶತಮಾನಗಳಿಂದ ಉಂಡ ಕಹಿ ಅನುಭವಗಳು ಅಕ್ಷರಗಳ ರೂಪದಲ್ಲಿ ಬಾಂಬಾಗಿ ಈ ಸಾಹಿತ್ಯದಲ್ಲಿ ಸಿಡಿದ್ದಿದ್ದನ್ನು ನಾವಿಲ್ಲಿ ಕಾಣಬಹುದು.

ಮರಾಠಿ ದಲಿತ ಸಾಹಿತ್ಯ 1970 ರಿಂದೀಚೆಗೆ ತನ್ನ "ವೈಭವ"ವನ್ನು ಪ್ರದರ್ಶಿಸಿದ್ದರೂ ಅದರ ಮೂಲದ ಬೇರುಗಳು ಅಂಬೇಡಕರ್ ಹಾಗೂ ಅದಕ್ಕಿಂತ ಮೊದಲು ಮಹಾತ್ಮಾ ಫುಲೆ ಅವರ ಚಳುವಳಿಗೆ ಹೋಗುತ್ತವೆ. ಯಾವ ಸಾಹಿತ್ಯ ಪುರೋಹಿತ ಶಾಹಿಯ ರಕ್ಷಣೆಗಾಗಿ ನಿಂತು, ಹಿಂದೂ ಧರ್ಮ, ವರ್ಣವಾದ, ಕರ್ಮವಾದ ದೈವವಾದ ಮತ್ತು ಜಾತಿವಾದಗಳನ್ನು ಪೋಷಿಸಲು ತನ್ನನ್ನು ತಾನು ಅರ್ಪಿಸಿಕೊಂಡಿತ್ತೋ ಅದೇ ಸಾಹಿತ್ಯದಲ್ಲಿ ಅಸಾಧ್ಯವಾದ ಕ್ರಾಂತಿಯಾಗಿ ಬಾಯಿಲ್ಲದ ಅನೇಕಾನೇಕ ಮೂಕರು ಒಮ್ಮಿಂದೊಮ್ಮೆಲೇ ಮಾತಾಡತೊಡಗಿರುವುದು ಒಂದು ಮಹತ್ವದ ಬೆಳವಣಿಗೆ. ಮರಾಠಿಯಲ್ಲಿ ಪುರೋಹಿತಶಾಹಿ ಸಾಹಿತ್ಯಕ್ಕೆ ಈ ಹಿಂದೆ ಎಷ್ಟು ಮಹತ್ವವಿತ್ತೆಂದರೆ 1909ರಲ್ಲಿ ಬಡೋದೆಯಲ್ಲಿ ನಡೆದ ಅಖಿಲ ಭಾರತ ಮರಾಠಿ ಸಾಹಿತ್ಯ ಸಮ್ಮೇಳನದಲ್ಲಿ "ಪೇಶ್ವೆಗಳ ದಫ್ತರ್ (ಸರಕಾರಿ ಕಾಗದ ಪತ್ರಗಳು) ಶೋಧಿಸಿ ಪ್ರಸಿದ್ಧಿಸಬೇಕು. ಹಾಗೆ ಮಾಡದಿದ್ದರೆ ರಾಷ್ಟ್ರಕ್ಕೆ ಬಲು ದೊಡ್ಡ ಹಾನಿಯಾಗುತ್ತದೆಂಬ" ಗೊತ್ತುವಳಿಯನ್ನು ಸ್ವೀಕರಿಸಲಾಗಿತ್ತು. ಪೇಶ್ವೆಗಳು ಮರಾಠಾ ಸಾಮ್ರಾಜ್ಯವನ್ನು ಹಾಳು ಮಾಡಿದ ಬ್ರಾಹ್ಮಣರೆಂದು ಈಗಲೂ ಮಹಾರಾಷ್ಟ್ರದ ಶ್ಯಾಣ್ಣವ ಕುಳಿಯ ಮರಾಠರು ಹಲ್ಲು ಕಡಿಯುತ್ತಾರೆ. ಛತ್ರಪತಿ ಶಿವಾಜಿಯ ಕಾಲಕ್ಕೆ ಅವನ ದಿವಾನರಾಗಿ (ಮಂತ್ರಿಗಳಾಗಿ) ಆಡಳಿತದ ಒಳಕ್ಕೆ ಹೊಕ್ಕ ಪೇಶ್ವೆಗಳು ಮುಂದೆ ತಾವೇ ಸ್ವತಂತ್ರ ರಾಜರೆಂದು ಘೋಷಿಸಿಕೊಂಡು ಪುಣೆ ಹಾಗೂ ಇತರ ಪ್ರದೇಶಗಳನ್ನು ಆಳಿದರು. ಈ ಪೇಶ್ವೆಗಳ ದಫ್ತರ್ ಸಾಹಿತ್ಯವಾದರೆ, ಆನಂತರ ಮಹಾರಾಷ್ಟ್ರ ಆಳಿದ ಮುಸಲ್ಮಾನರ ಮತ್ತು ಬ್ರಿಟಿಷರ ದಫ್ತರ್‌ವೇಕೆ ಸಾಹಿತ್ಯವಾಗಲಿಲ್ಲವೆಂದು ಮರಾಠಿಯ ಅನೇಕ ಜನ ಸಾಹಿತಿಗಳು ಆಗಾಗ ಟಾಂಟ್ ಹೊಡೆಯುತ್ತಿರುತ್ತಾರೆ. ವಿಚಿತ್ರವೆಂದರೆ 1909ರ ಗೊತ್ತುವಳಿಗೆ ಸಾಥ್ ನೀಡಿದಂತೆ ಇತಿಹಾಸಕಾರ ರಾಜಾ ರಾಜವಾಡೆಯವರು ಪೇಶ್ವೆಗಳ ಧಫ್ತರ್‌ನ್ನು ಸಂಗ್ರಹಿಸಿ, 600 ಪುಟಗಳ ಒಂದು ಪುಸ್ತಕವನ್ನು ಪ್ರಕಟಿಸಿದರು. ಇನ್ನೂ ಚೋದ್ಯವೆಂದರೆ ಈ ಪುಸ್ತಕವನ್ನು ಮಹಾರಾಷ್ಟ್ರ ಸಾಹಿತ್ಯ ಪರಿಷತ್ತೇ ಪ್ರಕಟಿಸಿತ್ತು.

ಹನ್ನೆರಡರಿಂದ ಹದಿನೆಂಟನೆಯ ಶತಮಾನದಲ್ಲಿ ಮರಾಠಿಯಲ್ಲಿ ಬಂದ ಸಾಹಿತ್ಯವನ್ನು "ಸಂತ, ಪಂತ, ತಂತ" ಸಾಹಿತ್ಯವೆಂದು ಮರಾಠಿಯ ಪ್ರಮುಖ ದಲಿತ ಲೇಖಕರಾದ ವಸಂತ ರಾಜಸ ಲೇವಡಿ ಮಾಡಿದ್ದಾರೆ. ಸಂತರ ಕಾಲದಲ್ಲಿ ರಚಿತವಾದ ಸಾಹಿತ್ಯ ಮುಖ್ಯವಾಗಿ ಭಕ್ತಿವಾದ, ಮತ್ತು ಆಧ್ಯಾತ್ಮಿಕತೆಯನ್ನು ಪುರಸ್ಕರಿಸಿತ್ತು. ಈ ಸಾಹಿತ್ಯ ಮನುಷ್ಯನ ಮೂಲಭೂತ ಸಮಸ್ಯೆಗಳ ಬಗ್ಗೆ ದಿವ್ಯ ನಿರ್ಲಕ್ಷ್ಯ ತೋರಿ ಕರ್ಮವಾದವನ್ನು ಮತ್ತಷ್ಟು ಗಟ್ಟಿಗೊಳ್ಳಲು ಸಹಾಯ ಮಾಡಿತು. ಇದರಿಂದ ಮೂಢ ನಂಬಿಕೆಗಳು ಹೆಚ್ಚಾಗಿ ಪುರೋಹಿತಶಾಹಿ ವರ್ಗ ಮತ್ತಷ್ಟು ಶೋಷಿಸುವಂತಾಯಿತು. ಮುಂದೆ ಬಂದ ಪಂತ ಸಾಹಿತಿಗಳು (ಪಂಡಿತ ಸಾಹಿತಿಗಳು) ಮರಾಠಿ ಭಾಷೆ ಮತ್ತು ಮರಾಠಿ ಸಾಹಿತ್ಯವನ್ನು ತಮಗೆ ಸಾಧ್ಯವಾದಷ್ಟು ಕೆಡಿಸಿದರು. ಪೇಶ್ವೆಗಳ ಕಾಲದಲ್ಲಿ ಒಮ್ಮಿಂದೊಮ್ಮೆಲೇ ಮಹತ್ವ ಪಡೆದ ತಂತ ಸಾಹಿತಿಗಳು ಅಂದರೆ ಶಾಹಿರ್ ಕವಿಗಳು, ಲಾವಣಿ ಹಾಗೂ ಶೃಂಗಾರಕ್ಕೆ ಹೆಚ್ಚಿನ ಒತ್ತುಕೊಟ್ಟರು. ಈ ಸಾಹಿತಿಗಳು ತಮ್ಮ ಶೃಂಗಾರಿಕ ಸಾಹಿತ್ಯದಿಂದ ಪೇಶ್ವೆಗಳನ್ನು ಮನಸೋಕ್ತ ರಂಜಿಸಿದರು. 19ನೆಯ ಶತಕದ ಆರಂಭದಲ್ಲಿ ಬಂದ ಸಾಹಿತ್ಯವೂ ಪುಣೆಯ ಸದಾಶಿವ ಪೇಠವನ್ನು (ಅಗ್ರಹಾರ) ಬಿಟ್ಟು ಹೊರಬಂದಿರಲಿಲ್ಲ. ನಂತರ ಬಂದ ಮಹಾತ್ಮಾ ಫುಲೆ, ಸುಧಾರಕ ಆಗರಕರ, ಲೋಕಹಿತವಾದಿ ಗೋಪಾಳಬಾಬಾ ವಲಂಗಕರ, ಶಿವರಾಮ ಜಾನಬಾ ಕಾಂಬಳೆ ಮುಂತಾದವರು ಸಾಹಿತ್ಯವನ್ನೇ ತಮ್ಮ ಚಳುವಳಿಯ ಅಸ್ತ್ರ ಶಸ್ತ್ರವನ್ನಾಗಿ ಮಾಡಿ ಸಾಹಿತ್ಯ ಮತ್ತು ಬದುಕು ಬೇರೆಯಲ್ಲವೆಂದು ತೋರಿಸಿಕೊಟ್ಟರು. ಮಹಾತ್ಮಾ ಫುಲೆ, "ಗುಲಾಮ ಗಿರಿ"ವೆಂಬ ಗ್ರಂಥವನ್ನು ಬರೆದು ವೇದ ಮಂತ್ರಗಳು ಮನುಷ್ಯನನ್ನು ಹೇಗೆ ಗುಲಾಮಗಿರಿಯತ್ತ ಒಯ್ಯುತ್ತವೆಂದು ಪ್ರಶ್ನೋತ್ತರ ರೀತಿಯಲ್ಲಿ ತೋರಿಸಿಕೊಟ್ಟರು. 1873ರಲ್ಲಿ ಬರೆದ "ಗುಲಾಮಗಿರಿ"ಯ ಶೈಲಿ ಈಗಲೂ ಹೊಸದೆನ್ನಿಸುವಂತೆ ಇದೆ. ಮಹಾತ್ಮಾ ಫುಲೆ ಬ್ರಾಹ್ಮಣರ ಮೇಲೆ ಅತ್ಯಂತ ಕೆಟ್ಟ ರೀತಿಯಲ್ಲಿ ಹಲ್ಲೆ ಮಾಡಿದ ವ್ಯಕ್ತಿ. ಅವರು ಉಪಯೋಗಿಸಿದ ಭಾಷೆಯೂ ಒರಟಾದ ಭಾಷೆ. ಮಹಾತ್ಮಾ ಫುಲೆಯ ಕಾಲವೆಂದರೆ ಪೇಶ್ವೆಗಳ ರಾಜ್ಯ ಅದೇ ಆಗ, ಮುಳುಗುತ್ತಿದ್ದ ಕಾಲ. ಪೇಶ್ವೆಗಳ ಕಾಲದಲ್ಲಿ ಕೇವಲ ಬ್ರಾಹ್ಮಣರಿಗೆ ಮಾತ್ರ ಎಲ್ಲ ತರದ ಸೌಲಭ್ಯಗಳಿದ್ದವು. ಹಣ, ಅಧಿಕಾರ, ದರ್ಪ ಇವುಗಳಿಂದ ಸೊಕ್ಕಿಗೆ ಬಂದಿದ್ದ ಪುರೋಹಿತ ವರ್ಗ ಸಮಾಜದ ಇತರ ವರ್ಗಗಳನ್ನು ಅತ್ಯಂತ ನಿಕೃಷ್ಟ ರೀತಿಯಲ್ಲಿ ಕಾಣುತ್ತಿದ್ದರು. ಇದು ಮಹಾತ್ಮಾ ಫುಲೆಯವರನ್ನು ಕೆರಳಿಸಿತು. ತಮ್ಮ "ಗುಲಾಮ ಗಿರಿ"ಯಲ್ಲಿ ಅವರು ಬ್ರಾಹ್ಮಣರನ್ನು ಚೆನ್ನಾಗಿ ಹಣಿಯುತ್ತಾರೆ. ಅದೇ ಕಾಲದಲ್ಲಿ ಫುಲೆಯವರು ಬರೆದ "ಬ್ರಾಹ್ಮಣಾಂಚೆ ಕಸಬ" (ಬ್ರಾಹ್ಮಣರ ಉದ್ಯೋಗ)ವೆಂಬ ಗ್ರಂಥ ಕೂಡ ದಲಿತರನ್ನು ಮನುಷ್ಯರನ್ನಾಗಿ ಮಾಡಲು ಅನೇಕ ರೀತಿಯಲ್ಲಿ ಯತ್ನಿಸಿದೆ.

ಬಾಬಾ ಸಾಹೇಬ ಅಂಬೇಡಕರ್ ಮರಾಠಿ ದಲಿತ ಸಾಹಿತ್ಯಕ್ಕೆ ಸಿಕ್ಕ ಒಂದು ದೊಡ್ಡ ನಿಧಿ. ಅಂಬೇಡಕರ್ ಕಥೆ, ಕಾದಂಬರಿ ಅಥವಾ ಕವಿತೆ ಬರೆಯದಿದ್ದರೂ ಅವರ ವಿಚಾರಗಳು, ಲೇಖನಗಳು ಇಡೀ ಮರಾಠಿ ದಲಿತರನ್ನು ಬಡಿದೆಬ್ಬಿಸಿದ್ದವು. ಇಂದಿನ ಮರಾಠಿಯ ಪ್ರಮುಖ ದಲಿತ ಲೇಖಕ ಅರ್ಜುನ ಡಾಂಗಳೆ, ಬಾಬಾಸಾಹೇಬ ಅಂಬೇಡಕರ್ ಹುಟ್ಟುವವರೆಗೆ ಈ ಸಮಾಜದ ಎಲ್ಲ ಸಾಮಾಜಿಕ—ಆರ್ಥಿಕ ಮತ್ತು ಐತಿಹಾಸಿಕ ಸಂಬಂಧಗಳನ್ನು ಉಚ್ಚ ಜಾತಿಯವರು ಕತ್ತರಿಸಿ ಹಾಕಿದ್ದರು. ಅಂಬೇಡಕರ್ ಬಂದ ನಂತರವೇ ಈ ಜನಕ್ಕೆ ತಾವೂ ಮನುಷ್ಯರೆಂದು ಗೊತ್ತಾದದ್ದು. ಫುಲೆ, ಬ್ರಾಹ್ಮಣರ ಮೇಲೆ ಎಷ್ಟೇ ಆಕ್ರಮಣ ಮಾಡಿದ್ದರೂ ಅವರು ದಲಿತರಾಗಿರಲಿಲ್ಲ. ಫುಲೆ, ಮಾಳಿ ಜಾತಿಗೆ ಸೇರಿದವರಾಗಿದ್ದರು. ಆದೇ ಅಂಬೇಡಕರ್ ದಲಿತ ಸಮಾಜದಿಂದಲೇ ಬಂದಿದ್ದರಿಂದ ಅವರ ಮಾತಿಗೆ, ಬರಹಕ್ಕೆ ಒಂದು ರೀತಿಯ ಕಿಮ್ಮತ್ತು ಬಂತು. ದಲಿತರು ಅವರ ಬರೆಹಗಳಲ್ಲಿ ತಮ್ಮನ್ನು ತಾವು ಕಂಡುಕೊಳ್ಳಲಾರಂಭಿಸಿದರು.

1920ರ ಸುಮಾರಿನಲ್ಲಿ ದಲಿತ ಸಮಾಜದ ಕೆಲವು ಜನರು, ತಮ್ಮ ಸಮಾಜದ ಧಾರುಣವಾದ ಪರಿಸ್ಥಿತಿಯನ್ನು ಲೇಖನಿಯ ಮೂಲಕ ಆ ಕಾಲದ ಬ್ರಿಟಿಷ ಸರಕಾರದ ಕಿವಿಗೆ ಹಾಕಲು ಯತ್ನಿಸಿದರು. ಹಿಂದೂ ಧರ್ಮದ ಅನಿಷ್ಟ ಪರಂಪರೆಗಳ ವಿರುದ್ಧ ಮತ್ತು ಮನುಸ್ಮೃತಿಯ ಅಮಾನುಷ ರೀತಿ-ನೀತಿಗಳ ವಿರುದ್ಧವಾಗಿ ಈ ಬರವಣಿಗೆ ಇತ್ತು. ಗೋಪಾಳ ಬಾಬಾ ವಲಂಗಕರ್, ಪಂಡಿತ ಕೊಂಡಿರಾಮ, ಮತ್ತು ಕಿಸನ ಫಾಗೋ ಬನಸೋಡೆ ಮುಂತಾದವರ ಹೆಸರುಗಳನ್ನು ಇಲ್ಲಿ ಉಲ್ಲೇಖಿಸಬಹುದು. ವಲಂಗಕರ್ ಸೈನ್ಯದಲ್ಲಿದ್ದರು. ಅವರಿಗೆ ಇಂಗ್ಲೀಷು ಬರುತ್ತಿತ್ತು. ಆ ಕಾಲದಲ್ಲಿ ಬ್ರಿಟಿಷ್ ಸರಕಾರ ಯಾವದೋ ಕಾರಣಕ್ಕಾಗಿ ಹೊಲೆಯರನ್ನು ಸೈನ್ಯದಲ್ಲಿ ಭರ್ತಿ ಮಾಡಿಕೊಳ್ಳುವುದನ್ನು ನಿಲ್ಲಿಸಿದ್ದರು. ಗೋಪಾಳ ಬಾಬಾ ವಲಂಗಕರ್ ಸರಕಾರದ ಈ ನಿಲುವಿನ ವಿರುದ್ಧ ಸಹಿ ಸಂಗ್ರಹ ಚಳುವಳಿ ನಡೆಸಿ ಸರಕಾರ ತನ್ನ ಆಜ್ಞೆಯನ್ನು ಹಿಂತೆಗೆದುಕೊಳ್ಳುವಂತೆ ಮಾಡಿದರು. ಮಹಾತ್ಮಾ ಫುಲೆಯವರ ಪ್ರಖರ ಅನುಯಾಯಿಯಾದ ಕಿಸನ ಫಾಗೋ ಬನಸೋಡೆ ಅನೇಕ ಕವಿತೆಗಳನ್ನು ಬರೆದರು. ವಿಚಿತ್ರವೆಂದರೆ ಇದೇ ಬನಸೋಡೆ, 1935ರಲ್ಲಿ ಡಾ॥ ಅಂಬೇಡಕರ್ ಯವಲೆ ಗ್ರಾಮದಲ್ಲಿ ಮಾಡಿದ ಧರ್ಮಾಂತರದ ಘೋಷಣೆಯನ್ನು ವಿರೋಧಿಸಿದರು.

ಡಾ॥ ಅಂಬೇಡಕರ್‌ರವರ ವೈಚಾರಿಕ ಪ್ರಖರತೆಗೆ ಇಡೀ ದಲಿತ ವರ್ಗ ಮಾರು ಹೋಯಿತು ತಮ್ಮನ್ನು ಶೋಷಿಸುವ ಸಮಾಜದ ಉಳಿದ ಶಕ್ತಿಗಳ ಬಗ್ಗೆ ದಲಿತರು ವಿಚಾರ ಮಾಡಹತ್ತಿದರು. ಅಂಬೇಡಕರ್‌ರು ಗಾಂಧೀಜಿಯನ್ನು ವಿರೋಧಿಸಿದ್ದರಿಂದ ಇಡೀ ದಲಿತವರ್ಗ ಗಾಂಧೀಜಿಯನ್ನು ವಿರೋಧಿಸಿತು. ಶಾಹಿರ್ ಘೇಗಡೆ ಗಾಂಧೀ

ಯನ್ನೂ ಅವರ ಸಮಾಜ ಪರಿವರ್ತನೆಯ ಧೋರಣೆಯನ್ನೂ ಈ ಕೆಳಕಂಡಂತೆ ವಿಶ್ಲೇಷಿಸಿದ,

ಗಾಂಧೀ ಮಹಾತ್ಮಾ ಕಸಲಾ
ಧೋಂಗಾಲಾ ಸಮಾಜ ಫಸಲಾ

(ಗಾಂಧೀ ಮಹಾತ್ಮಾ ಎಂಥವನು/ಇಡೀ ಸಮಾಜವೇ ಅವನಿಗೆ/ಮೋಸ ಹೋಯಿತು.)

ಅದೇ ಕಾಲಕ್ಕೆ ಬಂದ ಕೇರೂ ಬುವಾ ಗಾಯಕವಾಡ "ಹರಿಜನ" ಶಬ್ದದ ಬಳಕೆಯನ್ನು ವಿರೋಧಿಸಿದರು. ಈ ಶಬ್ದದಲ್ಲಿ ಮೋಸ ಅಡಗಿದೆಯೆಂದ ಅವರು ಬಹಿರಂಗವಾಗಿಯೇ ಪ್ರಕಟಿಸಿದರು. ಇದೇ ಗಾಯಕವಾಡ,

ನಕೋ ನಕೋ ವಿಠೋಬಾ ದೇವ ಆಮ್ಹಾಲಾ
ಪಾವಲಾ ಕಾ ಸಾಂಗಾ ಕಧೀ ಮಹಾರಾಲಾ
(ಬೇಡ ಬೇಡ ವಿಠೋಬಾ ದೇವ ನಮಗೆ/ಎಂದಾದರೂ ಅವ
ಒಲಿದನೇ ಹೊಲೆಯರಿಗೆ) ಎಂದೂ ಕೇಳಿದರು.

ಡಾ. ಅಂಬೇಡಕರ್ 1946ರಲ್ಲಿ ಪೀಪಲ್ಸ್ ಎಜ್ಯುಕೇಶನ್ ಸೊಸೈಟಿ ಸ್ಥಾಪಿಸಿ ಅದೇ ಕಾಲಕ್ಕೆ ಮುಂಬೈಯಲ್ಲಿ ಸಿದ್ಧಾರ್ಥ ಕಾಲೇಜನ್ನ ಅರಂಭಿಸಿದರು. 1950ರಲ್ಲಿ ಕೆಲವು ಜನ ಸಿದ್ಧಾರ್ಥ ಸಾಹಿತ್ಯ ಸಂಘವೆಂಬ ನಮ್ಮ ಇಲ್ಲಿಯ ಕಾಲೇಜಿನಲ್ಲಿರುವ ಕರ್ನಾಟಕ ಸಂಘದ ಮಾದರಿಯಲ್ಲಿ ಸಾಹಿತ್ಯಿಕ ಚಟುವಟಿಕೆಗಳ ಸಂಘವೊಂದನ್ನು ಆರಂಭಿಸಿದರು. ಇದೇ ಸಂಘ ಮುಂದೆ 1953ರಲ್ಲಿ ಮಹಾರಾಷ್ಟ್ರ ದಲಿತ ಸಾಹಿತ್ಯ ಸಂಘವೆಂಬ ಹೆಸರಿನಲ್ಲಿ ಮಾರ್ಪಾಡು ಹೊಂದಿ ಇಂದಿನ ಮರಾಠಿ ದಲಿತ ಸಾಹಿತ್ಯಕ್ಕೆ ನಾಂದಿ ಹಾಡಿತು.

1953–54ರಲ್ಲಿ ದಲಿತ ಜೀವನದ ನಿಜವಾದ ಚಿತ್ರಣ ನೀಡುವ ಅಣ್ಣಾ ಭಾವೂ ಸಾಠೆ ಬರೆಯಲಾರಂಭಿಸಿದರು. ಮರಾಠಿಯ ದಲಿತ ಸಾಹಿತಿಗಳು ಸಾಠೆಯವರನ್ನು ಮರಾಠಿಯ ಪ್ರಪ್ರಥಮ ಶ್ರೇಷ್ಠ ದಲಿತ ಸಾಹಿತಿಯೆಂದು ಗೌರವಿಸುತ್ತಾರೆ. ಈ ಸಾಠೆ ಮಾರ್ಕ್ಸವಾದಿಗಳಾಗಿದ್ದರು. ಅವರ ಮೇಲೆ ಮ್ಯಾಕ್ಸಿಂಗಾರ್ಕಿಯ ದಟ್ಟವಾದ ಪ್ರಭಾವವಿತ್ತು. ಸಾಠೆ ಕನಿಷ್ಠ 300 ಕಥೆಗಳನ್ನು, ಸುಮಾರು 96 ಕಾದಂಬರಿಗಳನ್ನ ಬರೆದಿದ್ದಾರೆ. ಕೊಲೆ, ಸುಲಿಗೆ, ನಾಯಕಿಣಿಯರ ಜಗಳ ಹೀಗೆ ಅವರ ಕಥೆ, ಕಾದಂಬರಿಗಳಲ್ಲಿ ಬರುವ ವಿಷಯಗಳು. ಅಣ್ಣಾ ಭಾವು ಸಾಠೆಯವರ ಕಥೆಗಳಲ್ಲಿ ಶೃಂಗಾರಕ್ಕೂ ಸ್ಥಾನವಿದೆ. ತಮ್ಮ ಕತೆಗಳಲ್ಲಿ ಬರುವ ಸ್ತ್ರೀಯರನ್ನು ಯಾವ ಸಂಕೋಚವಿಲ್ಲದೆ ಅವರು ವರ್ಣಿಸುತ್ತಿದ್ದರು. ಆಗಿನ ಸಾಹಿತ್ಯಕ್ಕೆ ಅದು ಅವಶ್ಯಕವೂ ಆಗಿದ್ದಂತೆ ಆಗಿನ ವಾಚಕರ ಅಭಿರುಚಿಯೂ ಆ ರೀತಿಯೇ ಇತ್ತು,

1958 ಮಾರ್ಚ್ 2 ರಂದು ಮಹಾರಾಷ್ಟ್ರ ದಲಿತ ಸಂಘ ಮುಂಬೈಯಲ್ಲಿ ಒಂದು ಸಾಹಿತ್ಯ ಸಮ್ಮೇಳನವನ್ನು ಸಂಘಟಿಸಿತ್ತು. ಈ ಸಮ್ಮೇಳನದ ಅಂಗವಾಗಿ "ದಲಿತ ಸಾಹಿತ್ಯದ ದೃಷ್ಟಿಕೋನ ಯಾವ ರೀತಿಯಲ್ಲಿರಬೇಕು ?" ಎಂಬ ವಿಷಯವಾಗಿ ಆಗಿನ "ಪ್ರಬಂದ್ಧ ಭಾರತ"ವೆಂಬ ಪಾಕ್ಷಿಕ ದಲಿತ ವಾರ ಪತ್ರಿಕೆ ಒಂದು ನಿಬಂಧ ಸ್ಪರ್ಧೆಯನ್ನೂ ಏರ್ಪಡಿಸಿದ್ದೀತು. ಈ ಪತ್ರಿಕೆಯ ಆಗಿನ ಸಂಪಾದಕ ಮತ್ತು ಈಗಿನ ಮಹಾರಾಷ್ಟ್ರದ ಸಚಿವ ದಾದಾಸಾಹೇಬ ರೂಪವತೆಯವರು ತಮ್ಮ ಸಂಪಾದಕೀಯದಲ್ಲಿ "ದಲಿತ ಜನ ಒಂದಿಲ್ಲೊಂದು ದಿನ ತಮ್ಮ ಹಕ್ಕುಗಳಿಗಾಗಿ ಬಂಡೇಳಬೇಕಾಗುತ್ತದೆಂದೂ ಈ ಬಂಡೇ ದಲಿತ ಸಾಹಿತ್ಯ"ವೆಂದೂ ವ್ಯಾಖ್ಯಾನಿಸಿದ್ದರು.

1957ರಲ್ಲಿ ಡಾ. ಮ. ನಾ. ವಾನಖೇಡೆಯವರು "ಅಸ್ಮಿತಾ" ಎಂಬ ಪತ್ರಿಕೆ ತೆಗೆದರು. ಅದೇ ಮುಂದೆ "ಅಸ್ಮಿತಾದರ್ಶ"ವಾಗಿ ಈಗ ಅದಕ್ಕೆ ಡಾ. ಗಂಗಾಧರ ಪಾನತಾವಣೆ ಸಂಪಾದಕ. ಡಾ. ವಾನಖೇಡೆ ದಲಿತ ಸಾಹಿತಿಗಳನ್ನು ಒಂದೆಡೆ ತಂದು ಅವರಿಗೆ ಪತ್ರಿಕಾರೂಪದ ವೇದಿಕೆಯನ್ನು ಒದಗಿಸಿದರು. ಮರಾಠಿ ದಲಿತರು ನಿಗ್ರೋ ಸಾಹಿತಿಗಳಂತೆ ಬರೆಯಬೇಕೆಂದೂ ಅವರ ಬರಹಗಳಲ್ಲಿ ಸಂತಾಪವಿರಬೇಕೆಂದೂ ಡಾ. ವಾನಖೇಡೆ ಪ್ರತಿಪಾದಿಸಿದರು. ಇದರರ್ಥ ಆರಂಭದ ಮರಾಠಿ ದಲಿತ ಸಾಹಿತಿಗಳಿಗೆ ತಾವು ಯಾವುದರ ಹಾಗೆ ಬರೆಯಬೇಕೆಂಬ ಸಮಸ್ಯೆ ಕಾಡಿದ್ದಿರಬೇಕು. ವಾನಖೇಡೆ ತಮ್ಮದೊಂದು ಲೇಖನದಲ್ಲಿ ನಿಗ್ರೋ ಸಾಹಿತ್ಯದ ರೂಪರೇಷೆಗಳನ್ನು ವಿವರಿಸುತ್ತಾರೆ. ನಿಗ್ರೋಗಳ ನೋವು ಮತ್ತು ಅವರು ಅನುಭವಿಸುತ್ತಿರುವ ಸಾಮಾಜಿಕ ಅಪಮಾನ ಭಾರತೀಯ ಅಸ್ಪೃಶ್ಯರ ಸಂದರ್ಭದಲ್ಲಿ ಒಂದೇ ಇರುವದರಿಂದ ನಿಗ್ರೋಗಳಂತೆಯೇ ದಲಿತ ಸಾಹಿತ್ಯ ನಿರ್ಮಾಣವಾಗಬೇಕೆಂದು ಡಾ. ವಾನಖೇಡೆ ವಾದಿಸುತ್ತಾರೆ.

ದಲಿತ ಶಬ್ಧದ ಪ್ರಯೋಗದ ಬಗ್ಗೆಯೂ ಅಲ್ಲಲ್ಲಿ ವಿಸಂಗತಿಯನ್ನು ಕಾಣಬಹುದು. ಅಂಬೇಡಕರ್ ಹುಟ್ಟುವುದಕ್ಕಿಂತ ಮೊದಲು ಬರೆದ ಮರಾಠಿ ಅಸ್ಪೃಶ್ಯ ಸಾಹಿತಿಗಳಾದರೂ ತಾವು ದಲಿತ ಸಾಹಿತಿಗಳೆಂದು ತಮ್ಮನ್ನು ಕರೆದುಕೊಳ್ಳಲಿಲ್ಲ. 1967ರ ನವ್ಹೆಂಬರ್, ಔರಂಗಾಬಾದದಲ್ಲಿ ನಡೆದ ಒಂದು ವಿಚಾರ ಸಂಕೀರಣದಲ್ಲಿ ಭಾಗವಹಿಸಿದ ಸಾಹಿತಿಗಳು ಈ ಹೊಸ ಸಾಹಿತ್ಯ ಪ್ರಕಾರವನ್ನು ದಲಿತ, ಪದ ದಲಿತ, ನವಬೌದ್ಧ ಈ ಪದಗಳಿಂದ ಕರೆದರು ಈ ಹಿಂದೆಯೇ ಅಂದರೆ 1948 ಮತ್ತು 1953ರಲ್ಲಿ "ದಲಿತ ಸಾಹಿತ್ಯ ಸಂಘ" ಮತ್ತು "ದಲಿತ ಸಾಹಿತಿಗಳ ಸಮಾಲೋಚನೆ"ಗಳು ನಡೆದಿದ್ದರೂ ದಲಿತ ಈ ಶಬ್ಧಕ್ಕೆ ಇನ್ನೂ ಹೆಚ್ಚಿನ ಒತ್ತು ಬಂದಿರಲಿಲ್ಲ. ಫೆಬ್ರವರಿ 29, 1976ರಲ್ಲಿ ರಾಜಾ ಢಾಲೆಯವರ ಅಧ್ಯಕ್ಷತೆಯಲ್ಲಿ ಮುಂಬೈಯಲ್ಲಿ ಭಾರತೀಯ ಬೌದ್ಧ ಸಾಹಿತ್ಯ ಸಮ್ಮೇಳನ ಜರುಗಿತು. ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ರಾಜಾ ಢಾಲೆ ದಲಿತ ಶಬ್ಧದ ವಿಶೇಷ ಉಲ್ಲೇಖವನ್ನು ಮಾಡಿದ್ದಾರೆ. 12-9-1953ರ

"ದಲಿತ ಸಾಹಿತ್ಯ ಸಮಾಲೋಚನೆ"ವೆಂಬ ತಮ್ಮ ಲೇಖನದಲ್ಲಿ ರೂಪಿಸಿರುವರು ಈ ಶಬ್ದ ಪ್ರಯೋಗ ಪ್ರಥಮವಾಗಿ ಮಾಡಿದ್ದಾರೆಂದು ಧಾಲೆ ಹೇಳಿದ್ದಾರೆ. ಆದರೆ ಅರ್ಜುನ ಡಾಂಗಳೆ ತಮ್ಮ "ದಲಿತ ಸಾಹಿತ್ಯಕ ಅಭ್ಯಾಸ" ಗ್ರಂಥದಲ್ಲಿ "ದಲಿತ ಸಾಹಿತ್ಯ"ವೆಂಬ ಶಬ್ದ ಪ್ರಯೋಗ "ಮರಾಠವಾಡಾ"ವೆಂಬ ಪತ್ರಿಕೆ ತನ್ನ 1969ರ ದೀಪಾವಳಿ ಸಂಚಿಕೆಯಲ್ಲಿ ಪ್ರಥಮವಾಗಿ ಪ್ರಯೋಗಿಸಿತ್ತೆಂದು ನೆನೆಸಿಸುತ್ತಾರೆ. ಆದರೆ 1958 ರಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ಸ್ವೀಕರಿಸಿದ ಒಂದು ಗೊತ್ತುವಳಿಯಲ್ಲಿ "ಮರಾಠಿ ಭಾಷೆ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ದಲಿತ ಲೇಖಕರು ಬರೆದ ಮತ್ತು ಅನ್ಯ ಲೇಖಕರು ದಲಿತರ ಬಗ್ಗೆ ರಚಿಸಿದ ಸಾಹಿತ್ಯ ದಲಿತ ಸಾಹಿತ್ಯವೆಂದೂ ವರ್ಗೀಕರಿಸಲ್ಪಡುವುದರಿಂದ ಮತ್ತು ಈ ಸಾಹಿತ್ಯ ಪ್ರಕಾರವು ಸ್ವತಂತ್ರವಾಗಿರುವುದರಿಂದ ಈ ಬಗ್ಗೆ ಎಲ್ಲ ಸಾಹಿತ್ಯ ಸಂಸ್ಥೆಗಳನ್ನು ಕಾಲೇಜು ಯುನಿವರ್ಸಿಟಿಗಳು ಗಮನಿಸಬೇಕೆಂದು" ಎಂದು ಹೇಳಿದೆ.

"ದಲಿತ ಸಾಹಿತ್ಯ ಸಂಘ"–ಆದೇಕೋ ದಲಿತ ಸಾಹಿತಿಗಳ ಪೂರ್ಣ ಪ್ರಮಾಣದ ವೇದಿಕೆಯಾಗಲಿಲ್ಲ. ಇಲ್ಲಿ ಕೆಲಸ ಮಾಡುವ ಜನರೆಲ್ಲ ಆಗಿನ ರಿಪಬ್ಲಿಕನ್ ಪಕ್ಷದ ಕಾರ್ಯಕರ್ತರಾಗಿದ್ದರು. ಬಾಬಾಸಾಹೇಬ ಅಂಬೇಡಕರ್‌ರ ಮಹಾ ನಿರ್ವಾಣವಾಗಿ ಕೇವಲ ಎರಡು ವರ್ಷದ ಅವಧಿಯಲ್ಲಿ ರಿಪಬ್ಲಿಕನ್ ಪಕ್ಷದಲ್ಲಿ ವ್ಯಕ್ತಿ ಸ್ಪರ್ಧೆ ಆರಂಭವಾಗಿತ್ತು. ಇದರ ಪರಿಣಾಮವಾಗಿ ಪಕ್ಷ ಬೇರೆ ಬೇರೆ ಗುಂಪುಗಳಲ್ಲಿ ಒಡೆದು ಹೋಯಿತು. ಇದರ ಪ್ರಭಾವ ದಲಿತ ಸಾಹಿತ್ಯ ಸಂಘದ ಮೇಲೂ ಆಯಿತು. ನಂತರ ಕೆಲವರು "ಮಹಾರಾಷ್ಟ್ರ ಬೌದ್ಧ ಪರಿಷತ್" ಆರಂಭಿಸಿದರೆ ಮತ್ತೆ ಕೆಲವರು "ಮಹಾರಾಷ್ಟ್ರ ಬೌದ್ಧ ಸಾಹಿತ್ಯ ಸಭಾ" ತೆಗೆದರು. ಇದೇ ಕಾಲಕ್ಕೆ ಬಾಬುರಾವ್ ಬಾಗೂಲ್, ಶಂಕರರಾವ ಖರಾತ ಬರೆಯಲಾರಂಭಿಸಿದರು. 1960ರ ನಂತರವಂತೂ ಮರಾಠಿಯ ಈ ಸಾಹಿತ್ಯದ ಸಮುದ್ರಕ್ಕೆ ಸಾವಿರಾರು ನದಿಗಳು ಬಂದು ಕೂಡಲಾರಂಭಿಸಿದವು. ನಾರಾಯಣ ಸುರ್ವೆ ಕಾರ್ಮಿಕರ, ದಲಿತರ ಕಥೆ, ವ್ಯಥೆ ಹಾಗೂ ವೇದನೆಗಳನ್ನು ಚಿತ್ರಿಸುವ ಕವಿತೆಗಳನ್ನು ಬರೆಯಲಾರಂಭಿಸಿದರು. ಕೆಲ ಜನ ದಲಿತ ಲೇಖಕರು Angry young men ವೆಂಬ little magazinesಗಳನ್ನು ಆರಂಭಿಸಿದರು. ಸತೀಶ ಕಾಳಸೇಕರ್, ಪ್ರ. ಶ್ರೀ. ನೆರೂರಕರ್, ನಾರಾಯಣ ಬಾಂದೇಕರ್ ಇವರ ಸಂಕಲನಗಳೂ ಹೊರಬಂದವು. ಕೆಲವರು ಸೈಕ್ಲೋಸ್ಟೈಲ್ ಕವನ ಸಂಕಲನಗಳನ್ನು ಪ್ರಕಟಿಸಿದರು.

ಜ್ಯಾನಿ ಜೂಕ ಕೇಲಿ ಇಥೇ ಜನ್ಮ ಘೇಣ್ಯಾಚಿ
ತ್ಯಾನಿಚ ತೀ ಸುಧಾರಲಿ ಪಾಹೀಜೆ
ದೇಶ ಸೋಡೂನ ಅಥವಾ
ಭೀಷಣ ಯುದ್ಧೇ ಕರೂನ

(ಇಲ್ಲಿ ಹುಟ್ಟುವ ತಪ್ಪು ಯಾರು ಮಾಡಿದ್ದಾರೋ/ಅವರೇ ಅದನ್ನು ಸರಿಪಡಿಸಲಿ/ದೇಶ ತ್ಯಾಗ ಮಾಡಿ ಅಥವಾ/ಭೀಷಣ ಯುದ್ಧ ಮಾಡಿಯಾದರೂ/ಅವರವನ್ನು ಹಾದಿಗೆ ತರಲಿ) ಎಂಬ ಕವಿತೆಗಳು ಮುಂದಿನ ಸಾಹಿತ್ಯದ ರೀತಿಯನ್ನು ನಿರ್ದಿಷ್ಟಪಡಿಸಿದವು.

1963ರಲ್ಲಿ ಬಾಬುರಾವ ಬಾಗೂಲ್ ಅವರ "ಜೆವ್ಹಾ ಮೀ ಜಾತ ಚೋರಲಿ ಹೊತಿ" (ಯಾವಾಗ ನಾನು ಜಾತಿಯನ್ನು ಬಚ್ಚಿಟ್ಟುಕೊಂಡಿದ್ದೆ) ಕಥಾ ಸಂಗ್ರಹ ಪ್ರಕಟವಾಯಿತು. ಈ ಸಂಗ್ರಹಕ್ಕೆ ಅಭೂತ ಪೂರ್ವವಾದ ಸ್ವಾಗತ ಸಿಕ್ಕಿತು. ಕೆಲವು ವಿಮರ್ಶಕರು ಇಲ್ಲಿಯ ಹತ್ತೂ ಕಥೆಗಳನ್ನು ನಿಗ್ರೋ ಸಾಹಿತ್ಯದ ಶ್ರೇಷ್ಠತ್ವಕ್ಕೆ ತುಲನೆ ಮಾಡಿದರು. ಇನ್ನೂ ಹಲವರು ಇದು ದಲಿತರ ಮಹಾ ಕಾವ್ಯವೆಂದು ಕರೆದರು. ಅರ್ಜುನ ಡಾಂಗಳೆ—"ಇಲ್ಲಿಯ ಹತ್ತು ಕಥೆಗಳು ಸಂಪ್ರದಾಯವಾದಿ ಸಾಹಿತ್ಯಕ್ಕೆ ಬಿದ್ದ ಹತ್ತು ಹಂಟರಿನ ಹೊಡೆತಗಳು"ಎಂದು ಈ ಸಂಕಲನವನ್ನ ವರ್ಣಿಸಿದ್ದಾರೆ. ಇಲ್ಲಿಯ ಕಥೆಗಳು ಮುಂದಿನ ಯುವ ಲೇಖಕರಿಗೆ ಯಾವುವರ ಬಗೆ ಮತ್ತು ಹೇಗೆ ಬರೆಯಬಹುದೆಂಬುವಕ್ಕೆ ದಾರಿ ದೀಪವಾದವು. ಅನೇಕರಿಗೆ ಅನುಭವಗಳಿದ್ದರೂ ಅವನ್ನ ಶಬ್ದಗಳ ರೂಪದಲ್ಲಿ ಹೇಗೆ ಮಂಡಿಸಬೇಕೆಂಬ ಸಮಸ್ಯೆಯಿತ್ತು. ಬಾಬುರಾವ ಬಾಗೂಲ್‌ರ ಈ ಕಥೆಗಳು ಅವರ ಈ ಸಮಸ್ಯೆಯನ್ನು ಬಲು ಸುಲಭವಾಗಿ ನಿವಾರಿಸಿಬಿಟ್ಟವು.

1967ರಲ್ಲಿ "ಮಹಾರಾಷ್ಟ್ರ ಬೌದ್ಧ ಸಾಹಿತ್ಯ ಸಭೆ" ಮುಂಬೈಯಲ್ಲಿ ಒಂದು ಸಾಹಿತ್ಯ ಸಮ್ಮೇಳನವನ್ನು ಆಯೋಜಿಸಿತ್ತು. ಈ ಸಮ್ಮೇಳನದಲ್ಲಿ ದಲಿತ ಸಾಹಿತ್ಯದ ರೂಪರೇಷೆಗಳ ಬಗ್ಗೆ ವಿಸ್ತೃತವಾದ ಚರ್ಚೆ ವಿಚಾರ ವಿಮರ್ಶೆಗಳಾದವು. ಬಾಬುರಾವ ಬಾಗೂಲ್, ಡಾ. ಮ. ನಾ. ವಾನಖೇಡೆ, ಪ್ರೊ. ಮ. ಭೀ. ಚಿಟಣೀಸ್, ಘನಶ್ಯಾಮ ತಳವಟಕರ್, ವಾಮನ ನಿಂಬಾಳಕರ್, ದಯಾ ಪವಾರ, ಸುಖರಾಮ ಹಿವರಾಳೆ, ದಿನೇಶ ಲಖಮಾಪುರಕರ್ ಮುಂತಾದ ಜನ ಈ ಚರ್ಚೆ, ವಿಚಾರ, ವಿಮರ್ಶೆಗಳಲ್ಲಿ ಭಾಗವಹಿಸಿದ್ದರೆ ಇಲ್ಲಿ ನಡೆದ ಕವಿಗೋಷ್ಠಿಯ ಒಂದು ಕವನ ಸಂಕಲನ "ಆಕಾರ" ಪ್ರಕಾಶಿತವಾಯಿತು. ಬಾಬುರಾವ ಬಾಗೂಲ್, ದಯಾ ಪವಾರ, ಅರ್ಜುನ ಡಾಂಗಳೆ, ಯಾದವರಾವ್ ಗಾಂಗುರ್ಡೆ, ಪರೀಶ ಬುಕಾವೆ, ಜೋಗಿಂದ ಕಾಂಬಳೆ, ಬಾಘು ಮಾಧವ, ಹೀರಾ ಬನಸೋಡೆ ಮುಂತಾದವರ ಕವಿತೆಗಳು ಈ ಸಂಗ್ರಹದಲ್ಲಿವೆ. ಇದು ದಲಿತ ಕವಿ, ಕವಿಯತ್ರಿಯರ ಮೊಟ್ಟಮೊದಲ ಮರಾಠಿ ಕಾವ್ಯದ ಅಂಥಾಲಜಿ.

1968 ರಲ್ಲಿ ಬಾಬುರಾವ ಬಾಗೂಲ್‌ರ ಎರಡನೆಯ ಕಥಾ ಸಂಕಲನ "ಮರಣ ಸ್ವಸ್ಥ ಹೋತ ಆಹೆ"ಬಂತು. ಇದಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನವೂ

ಬಂತು. 1970ರಲ್ಲಿ ಬಾಗೂಲ್ "ಸೂಡಿ" ಎಂಬ ದೀರ್ಘ ಕಥೆ ಬರೆದರು. ಇದೇ ಕಾಲಕ್ಕೆ "ಆವ್ಹಿ" ಮತ್ತು "ಮಾಗೋವಾ" ಎಂಬ ಸಾಹಿತ್ಯಿಕ ಪತ್ರಿಕೆಗಳು ಆರಂಭಗೊಂಡು ಆರ್ಥಿಕ ಅಡಚಣೆಯಿಂದಾಗಿ ಸತ್ತು ಹೋದವು.

1972ರಲ್ಲಿ ಮರಾಠಿ ದಲಿತ ಸಾಹಿತ್ಯ ಕ್ಷಿತಿಜದ ಮೇಲೆ ಒಂದು ಹೊಸ ಸೂರ್ಯ ಉದಯಿಸಿದ. ಅವನೇ ನಾಮದೇವ ಢಸಾಳ. ಯಾವಾಗಲೂ ಸೂಳೆಯರ ಮನೆಯಲ್ಲಿ ಬಿದ್ದಿರುತ್ತಿದ್ದ, ಮುಂಬೈಯ ಜನನಿಬಿಡ ರಸ್ತೆಗಳಲ್ಲಿ ಟ್ಯಾಕ್ಸಿ ಡ್ರೈವರ್‌ನಾಗಿದ್ದ ನಾಮದೇವ ಢಸಾಳ ದಲಿತ ಸಾಹಿತ್ಯದ ಹೊಸ ಆಶಾಕಿರಣವಾದ. ಅವನು "ಗೋಲಪೀತಾ" ಕವಿತಾ ಸಂಗ್ರಹ ಹೊಸ ಭಾಷೆಯ ಬಗ್ಗೆ ಮಾತಾಡಿತಲ್ಲದೇ ಅವನ ಆಕ್ರಮಕ ಶೈಲಿ ಜನರಿಗೆ ಹೊಸ ಅನುಭವವನ್ನು ನೀಡಿತು. ನಾಮದೇವ ಢಸಾಳ ಶಬ್ದಗಳನ್ನು ಮುರಿದ, ಭಾಷೆಯನ್ನು ಕೆಡಿಸಿದ. ಅವನ ಕವಿತೆಗಳನ್ನು ಅರ್ಥ ಮಾಡಿಕೊಳ್ಳುವುದಕ್ಕಾಗಿ ಒಂದು ಹೊಸ ಡಿಕ್ಷನರಿಯೇ ಬೇಕಾಯಿತು. "ನನ್ನ ರಕ್ತದಿಂದ ಹುಟ್ಟಿದ ಅಗಣಿತ ಸೂರ್ಯರೇ"ಎಂದು ಢಸಾಳ ಇಡೀ ದಲಿತ ವರ್ಗವನ್ನು ಸೂರ್ಯನ ತುಣುಕೆಂದು ಕರೆದ. ಇದೇ ಢಸಾಳ ಮುಂದೆ "ತಂರಿಖೀ ಇಯತ್ತಾ ಕಂಚೀ" ಎಂಬ ಸಂಕಲನ ತಂದ. ಆದರೆ "ಗೋಲಪೀತಾ"ಕ್ಕೆ ಸಿಕ್ಕ ಪ್ರಚಂಡ ಯಶಸ್ಸು ಅವನ ನಂತರದ ಈ ಕೃತಿಗೆ ಲಭ್ಯವಾಗಲಿಲ್ಲ.

ನಂತರದ ಕಾಲ ದಲಿತ ಪ್ಯಾಂಥರದ ಆರಂಭದ ದಿನಗಳು—ರಿಪಬ್ಲಿಕನ್ ಪಕ್ಷದ ನಿಷ್ಕ್ರಿಯತೆ ಮತ್ತು ಅದರ ಸಮಯಸಾಧಕತೆಯಿಂದಾಗಿ ಯುವಕರೆಲ್ಲ ಒಂದು ರೀತಿಯ ರಾಜಕೀಯ ಶೂನ್ಯತೆಯನ್ನು ಅನುಭವಿಸುತ್ತಿದ್ದರು. ಇದೇ ಹೊತ್ತಿಗೆ ಬಾವಡಾ ಎಂಬ ಊರಿನಲ್ಲಿ ಹರಿಜನರಿಗೆ ಸವರ್ಣೀಯರು ಬಹಿಷ್ಕಾರವನ್ನು ಹಾಕಿದರು. ಇದರ ಪ್ರತಿಭಟನಾರ್ಥವಾಗಿ ಸಿದ್ಧಾರ್ಥ ಕಾಲೇಜಿನ ದಲಿತ ವಿದ್ಯಾರ್ಥಿಗಳು "ಯುವಕ ಆಘಾಡಿ" ಎಂಬ ಅಡ್‌ಹಾಕ್ ಸಂಘಟನೆಯನ್ನು ಸಂಘಟಿಸಿ ಮುಖ್ಯಮಂತ್ರಿಗಳ ಮನೆಯೆದುರು ಧರಣಿ ಸತ್ಯಾಗ್ರಹ ನಡೆಸಿದರು. ಮುಂದೆ ಒಂದೇ ತಿಂಗಳಿನಲ್ಲಿ ಈ "ಯುವಕ ಆಘಾಡಿ" ಎಂಬ ಅಡ್‌ಹಾಕ್ ಸಂಘಟನೆಯನ್ನು ಸಂಘಟಿಸಿ ಮುಖ್ಯಮಂತ್ರಿಗಳ ಮನೆಯೆದುರು ಧರಣಿ ಸತ್ಯಾಗ್ರಹ ನಡೆಸಿದರು. ಮುಂದೆ ಒಂದೇ ತಿಂಗಳಿನಲ್ಲಿ ಈ "ಯುವಕ ಆಘಾಡಿ" ಒಡೆದು ಹೋಯಿತು. ಆಫ್ರಿಕೆಯ ನಿಗ್ರೋ ಸಂಘಟನೆಯಿಂದ ಪ್ರಭಾವಿತರಾದ ನಾಮದೇವ ಢಸಾಳ, ರಾಜಾಢಾಲೆ, ಜ. ವಿ. ಪವಾರ, ಅರ್ಜುನ ಢಾಂಗಳೆ 9, ಜುಲೈ 1972 ರಂದು "ದಲಿತ ಪ್ಯಾಂಥರ್"ನ್ನು ಆರಂಭಿಸಿದರು. ಆಗಸ್ಟ್ 15ನ್ನು ದಲಿತರೆಲ್ಲ ಕಪ್ಪು ದಿನವನ್ನಾಗಿ ಆಚರಿಸಬೇಕೆಂದು ದಲಿತ ಪ್ಯಾಂಥರ್ ಕರೆ ನೀಡಿತು. ಆ ವರ್ಷ ಪ್ಯಾಂಥರ್‌ದ ಕಾರ್ಯಕರ್ತರು ಮುಂಬೈ

ತುಂಬ ಕೈಯಲ್ಲಿ ಕಪ್ಪು ಧ್ವಜ ಹಿಡಿದು ಮೆರವಣಿಗೆ ನಡೆಸಿದರಲ್ಲದೇ ಹಲವೆಡೆ ರಾಷ್ಟ್ರ ಧ್ವಜದ ಬದಲಾಗಿ ಕಪ್ಪು ಧ್ವಜವನ್ನು ಹಾರಿಸಿದರು. ರಾಜಾ ಢಾಲೆ "ಸಾಧನಾ" ಎಂಬ ಪತ್ರಿಕೆಯಲ್ಲಿ ರಾಷ್ಟ್ರ ಧ್ವಜದ ವಿರುದ್ಧ ಅತ್ಯಂತ ಅಶ್ಲೀಲವಾಗಿ ಟೀಕಿಸಿದರು. ಇದು ಸಾಹಿತ್ಯ ಕ್ಷೇತ್ರದಲ್ಲಿದ್ದಂತೆ ರಾಜಕೀಯ ಕ್ಷೇತ್ರದಲ್ಲಿಯೂ ಕೋಲಾಹಲಕ್ಕೆ ಕಾರಣ ವಾಯಿತು. ದಲಿತ ಪ್ಯಾಂಥರ್ ಒಂದು militant organisation ಆಗಿ ಮಹಾರಾಷ್ಟ್ರದ ತುಂಬ ತನ್ನ ಪ್ರಭಾವವನ್ನು ಬೀರಿತು. ಬಹುತೇಕ ದಲಿತ ಸಾಹಿತಿ ಗಳೆಲ್ಲ ಪ್ಯಾಂಥರ್ ಸೇರಿದರು. ಆದರೆ ಮುಂದೆ ಹಲ ಕೆಲ ವೈಯಕ್ತಿಕ ಮತ ಭೇದ ಗಳಿಂದ ಒಂದು ರಾಜಕೀಯ ಶಕ್ತಿಯಾಗಿ ಬೆಳೆಯಬಹುದಾಗಿದ್ದ ಪ್ಯಾಂಥರ್ ಒಡೆದು ಹೋಯಿತು. ದಲಿತ ಪ್ಯಾಂಥರನ್ನು ರಾಜಕೀಯವಾಗಿ ಬಳಸಿಕೊಳ್ಳಲು ಅನೇಕ ರಾಜಕೀಯ ಪಕ್ಷಗಳೂ ಯತ್ನಿಸಿದವು. ಕೆಲ ಪತ್ರಿಕೆಗಳು ದಲಿತ ಪ್ಯಾಂಥರ್‌ಗಳ ನಾಯಕರುಗಳಲ್ಲಿ ಕೆಲವರಿಗೆ ಅಸಾಮಾನ್ಯವಾದ ಪ್ರಸಿದ್ಧಿಯನ್ನು ನೀಡಿ ಉಳಿದ ನಾಯಕರುಗಳು ಅವರ ಬಗ್ಗೆ ಅಸೂಯೆ ಪಡುವಂತೆ ಮಾಡಿ ಅವರವರಲ್ಲಿಯೇ ವೈರತ್ವದ ಬೀಜವನ್ನು ನೆಟ್ಟವು. ಏನೇ ಆದರೂ ದಲಿತ ಪ್ಯಾಂಥರ್ ಮರಾಠಿ ದಲಿತ ಸಾಹಿತ್ಯದ ಭವ್ಯತೆಗೆ ತನ್ನ ಪಾಲನ್ನು ನೀಡಿತು.

1972ರಿಂದ ಅನೇಕ ಜನ ದಲಿತ ಸಾಹಿತಿಗಳು ಬರೆಯಲಾರಂಭಿಸಿದರು. ಅವರ ಸಾಹಿತ್ಯವನ್ನು ಪ್ರಚಾರ ಮಾಡಲೆಂದು ಅನೇಕ ಪತ್ರಿಕೆಗಳು ಪ್ರಿಂಟಾಗಲಾರಂಭಿಸಿದವು. 'ಅಸ್ತಿತ್ವ', 'ನಿಕಾಯ', 'ಪ್ರಮೇಯ', 'ದಲಿತಕ್ರಾಂತಿ ಸಂಪದ', 'ಜಾತಕ', 'ದಲಿತ ಕ್ರಾಂತಿ', 'ವಿದ್ರೋಹ', 'ಸಮಾಜ', 'ಲೋಕಾನುಕಂಪ', 'ಬಹುಜನ ಸಂಘರ್ಷ', ಹೀಗೆ ಅನೇಕ ಪತ್ರಿಕೆಗಳು ಇವರಿಗೆ ಧ್ವನಿ ನೀಡಿದವು, "ಮಹಾರಾಷ್ಟ್ರ ಟಾಯಿಮ್ಸ್", ಟೈಮ್ಸ್ ಆಫ್ ಇಂಡಿಯಾ", "ಸಾರಿಕಾ", "ಮಾಯ ಮರಾಠಿ", ಮತ್ತು "ಸಿಂಹಗರ್ಜನಾ" ಪತ್ರಿಕೆಗಳು ಮರಾಠಿ ದಲಿತ ಸಾಹಿತ್ಯದ ಮೇಲೆ ವಿಶೇಷಾಂಕ ಗಳನ್ನು ಹೊರತಂದವು.

ಬಾಬುರಾವ್ ಬಾಗೂಲ್ ಅವರ ಬರೆಹಗಳಲ್ಲಿ ಹಿಂದೂ ಧರ್ಮದ ಮೇಲಿನ ಆಕ್ರಮಣವನ್ನು ಕಾಣಬಹುದು. ಬಾಗೂಲ್ ಅವರ ಅಭಿಪ್ರಾಯದಲ್ಲಿ ದುಃಖದ ಮೂಲ ಜಾತಿ. ಜಾತಿಯ ಮೂಲ ವರ್ಣ. ವರ್ಣಕ್ಕೆ ಮೂಲ ಹಿಂದೂ ಧರ್ಮ. ಉಚ್ಚ ವರ್ಣಕ್ಕೆ ಹಿಂದೂ ಧರ್ಮ ಎಲ್ಲವನ್ನೂ ನೀಡುತ್ತದೆ. ಅದೇ ನೀಚ ವರ್ಣ ವನ್ನು ಅದು ತಿರಸ್ಕರಿಸುತ್ತದೆ. ಆ ಕಾರಣವಾಗಿಯೇ ಬಾಗೂಲ್ ಧರ್ಮದ ಮೇಲೆ ಮುಗಿ ಬೀಳುತ್ತಾರೆ. ಅವರು ತಮ್ಮ ಶತ್ರುಗಳನ್ನು ಗುರುತಿಸಿಕೊಂಡಿದ್ದಾರೆ. ಅವರ ಶತ್ರು ಎಲ್ಲೆಡೆಗೂ ಅವಿತುಕೊಂಡಿದ್ದಾನೆ. ಇವರು (ದಲಿತ ಸಾಹಿತಿಗಳು) ಮೈಮರೆ ಯುವುದನ್ನೇ ಅವ ಕಾಯುತ್ತಿದ್ದಾನೆ. ಅದಕ್ಕಾಗಿ ಬಾಗೂಲ್ ದಲಿತ ಸಾಹಿತಿಗಳೆಲ್ಲ

ಸ್ಟಾಲಿನ್, ಅಂಬೇಡಕರ್ ಅಥವಾ ಮಾವೋರಂತೆ ಗಟ್ಟಿಯಾಗಿರಬೇಕೆಂದು ಹೇಳ
ತ್ತಾರೆ. ಬಾಗೂಲ್ ಮುಂಬೈಯ ಜೋಪಡಿ ಪಟ್ಟಿಗಳ ಬಗ್ಗೆ, ಅಲ್ಲಿಯ ಸೂಳೆಯರ
ಬಗ್ಗೆ ಬರೆದಿದ್ದಾರೆ.

ಕೇಶವ ಮೆಶ್ರಾಮ, ಅರ್ಜುನ ಡಾಂಗಳೆ ಮುಂತಾದವರು ಕಥೆ ಹಾಗೂ ಕವಿತೆ
ಗಳನ್ನು ಬರೆದು ತಮ್ಮ ಸಮಾಜ ಅನಂಭವಿಸುತ್ತಿರುವ ಧಾರುಣ ಪರಿಸ್ಥಿತಿಯನ್ನು
ಜಗತ್ತಿನೆದುರಿಟ್ಟರು. ಡಾಂಗಳೆಯವರ ಕಥೆಯಲ್ಲಿ ಏಕಾಂಗಿತನ ಕಾಡುತ್ತದೆ. ಕೇಶವ
ಮೆಶ್ರಾಮ ತಮ್ಮ ಕಥೆಗಳಲ್ಲಿ ಪುಢಾರಿಗಳು ಯಾವ ರೀತಿಯಿಂದ ಜನರನ್ನು ಶೋಷಣೆ
ಮಾಡುತ್ತಾರೆಂಬುದನ್ನ ಚಿತ್ರಿಸಿದ್ದಾರೆ. ಅಚ್ಚರಿಯ ವಿಷಯವೆಂದರೆ ದಲಿತರಲ್ಲದ
ಮತ್ತು ಜಾತಿಯಿಂದ ಬ್ರಾಹ್ಮಣರಾಗಿದ್ದ ವೆಂಕಟೇಶ್ ಮಾಡಗೂಳಕರ್ ಮರಾಠಿ
ದಲಿತ ಕಥೆಗಾರರಲ್ಲಿ ಅಗ್ರಗಣ್ಯರೆಂದು ಹೆಸರು ಪಡೆದಿದ್ದಾರೆ. ಅವರ "ದೇವಾ ಸಟವಾ
ವಹಾರ್" ಮರಾಠಿ ಸಾಹಿತ್ಯದಲ್ಲಿ ವಿದ್ರೋಹವನ್ನು ಸ್ಫೋಟಿಸುವ ಮೊಟ್ಟ
ಮೊದಲು ಕಥೆಯೆಂದು ಡಾ. ಗೋ. ಮಾ. ಪವಾರ ಅಭಿಪ್ರಾಯಪಡುತ್ತಾರೆ.
ಮಾಡಗೂಳಕರ್ ಹೊಲೆಯ ರಾಮೋಶಿ ಮುಂತಾದ ಸಮಾಜಗಳ ಮೆಲೆಯೂ ಕಥೆ
ಗಳನ್ನು ಬರೆದಿದ್ದಾರೆ.

ಮರಾಠಿಯಲ್ಲಿ ದಲಿತ ನಾಟಕಗಳು ಹೆಚ್ಚಿನ ಸಂಖ್ಯೆಯಲ್ಲಿ ಬರಲಿಲ್ಲ. ಅಲ್ಲಲ್ಲಿ
ಕೆಲವು ಮಾತ್ರ ಬಂದಿದ್ದರೂ ಅವು ಇಲ್ಲಿ ಉಲ್ಲೇಖವನ್ನು ಮಾಡಲೇಬೇಕೆಂಬುವಷ್ಟು
ಶ್ರೇಷ್ಠವಾಗಿಲ್ಲ. ಆದರೆ ಮರಾಠಿಯ ಆತ್ಮಕಥೆ ಪ್ರಕಾರ ಮಾತ್ರ ಬೇರೆ ಭಾರತೀಯ
ಭಾಷೆಗಳಿಗಿಂತಲೂ ವಿಶಿಷ್ಟವಾದದು. ಮರಾಠಿಯಲ್ಲಿ ಬಹುಶಃ ಪ್ರತಿಯೊಬ್ಬ ಲೇಖಕನ
ಆತ್ಮ ಚರಿತ್ರೆ ಪ್ರಕಟವಾಗಿದೆ. ಹಲ ಕೆಲ ಜನ ಆತ್ಮಕಥೆ ಬರೆಯುವುದರಿಂದಲೇ ಆ
ಸಾಹಿತ್ಯ ಕೃಷಿಯನ್ನು ಆರಂಭಿಸಿದವರೂ ಇದ್ದಾರೆ. ಕಥೆ ಕಾದಂಬರಿಗಳಿಗಿಂತ ಈ
ಆತ್ಮಕಥೆಗಳು ಹೆಚ್ಚು ರೋಮ್ಯಾಂಟಿಕ್ ಇದ್ದುದರಿಂದ ಅವುಗಳಿಗೆ ಮಾರ್ಕೆಟ್ಟೂ
ಸುಲಭವಾಗಿ ಸಿಕ್ಕೀತು. ಈ ಆತ್ಮಕಥೆಗಳಿಂದ ಬೇರೆ ಜಾತಿಯ ಜನರ ಜೀವನದ
ರೀತಿ-ನೀತಿ ಕ್ರಮಗಳು ಜನರಿಗೆ ಓದಲು ಸಿಕ್ಕವು. ಇಲ್ಲಿಯವರೆಗೆ ಮುದ್ರಿತವಾಗಿರಬಹು
ದಾದ ಸುಮಾರು 250 ಆತ್ಮಕಥೆಗಳಲ್ಲಿ ಹೆಚ್ಚಿನವು ಪ್ರಾಮಾಣಿಕವಾಗಿವೆ. ಕೆಲವನ್ನು
ಬಿಟ್ಟರೆ ಉಳಿದೆಲ್ಲವುಗಳಿಗೆ ಸಾಹಿತ್ಯದ ಸಂಸ್ಕಾರವಿದೆ. ಓದಿಸಿಕೊಂಡು ಹೋಗುವ ಶೈಲಿ,
ಭಾಷೆಯಲ್ಲಿ ಬಿಗುವು ಹಾಗೂ ಮಂಡಿಸಬೇಕಾದ ಆಕರ್ಷಣೆ ರೀತಿ ಇವುಗಳಿಂದ ಈ
ಆತ್ಮಕಥೆಯ ಪ್ರಾಕಾರ ಬೇರೊಂದು ಲೋಕವನ್ನೇ ಓದುಗರೆದುರು ಬಿಚ್ಚಿಡುತ್ತವೆ.

ಪ್ರಹ್ಲಾದ ಸೋನಕಾಂಬಳೆಯವರ "ಆಠವಣಿಚೆ ಪಕ್ಷಿ" ಕೋಂಡಿನೀಕರ ಅವರ
"ಮುಕ್ಕಾಮ ಪೋಸ್ಟ್ ದೇವಾಚಿ ಗೋಠಣೆ" ಇವುಗಳಲ್ಲಿ ಅವರವರ ಸಮಾಜದ
ಪ್ರಾಮಾಣಿಕ ಚಿತ್ರಣವಿದೆ. ಲಕ್ಷ್ಮಣ ಮನೆಯವರ "ಉಪರಾ" ಒಂದು ಬಂಧಿಸ್ತ

ಸಮಾಜದ ಬಗೆಗಿನ ವಿವರಣೆಯಿದೆ. ತನ್ನ ತಾಯಿಯನ್ನು ತಂದೆ ಹೇಗೆ ಬಗೆಯುತ್ತಾನೆಂಬುದನ್ನು ಮಾನೆ ಬರೆಯುತ್ತಾರೆ. ಲಕ್ಷ್ಮಣ ಗಾಯಕವಾಡರ "ಉಚಲ್ಯಾ"ದಲ್ಲಿ ಸಣ್ಣ ಹುಡುಗರಿಗೆ ಹೇಗೆ ಕಳುವು ಮಾಡಬೇಕೆಂಬುದನ್ನು ಕಲಿಸುವ ವಿವರಣೆಯಿದೆ. "ಉಚಲ್ಯಾ" ಎಂದರೆ ಒಂದು ಕಳ್ಳರ ಜಾತಿ. ಆ ಜಾತಿಗೆ ಗಾಯಕವಾಡ ಸಂಬಂಧಪಟ್ಟಿರುವುದರಿಂದ ಅಲ್ಲಿಯ ಎಲ್ಲ ಒಳ ಸೂಕ್ಷ್ಮಗಳನ್ನು ಅವರು ಬಿಚ್ಚಿಡುತ್ತಾರೆ. ಇದರ ಜೊತೆಗೆಯೇ ಮಲ್ಲಿಕಾ ಅಮರಶೇಖರ "ಮಲಾ ಉಧ್ವಸ್ಥವ್ಹಾಯಚಾಯ" ಆತ್ಮಕಥೆ ಅತ್ಯಂತ ಶ್ರೇಷ್ಠವೆಂದು ಹೊಗಳಿಸಿಕೊಂಡಿದೆ. ಮಲ್ಲಿಕಾ, ನಾಮದೇವ ಢಸಾಳನ ಹೆಂಡತಿ. ಈ ಆತ್ಮಕಥೆಯಲ್ಲಿ ಆಕೆ ಢಸಾಳನನ್ನೂ ಬಿಡುವುದಿಲ್ಲ. ಅವನ ಟೀಕೆ ಅವಶ್ಯವೆನ್ನಿಸಿದಾಗ ಮಲ್ಲಿಕಾ ಹಿಂದೆ ಮುಂದೆ ನೋಡದೇ ಢಸಾಳನನ್ನು ಟೀಕಿಸುತ್ತಾಳೆ. ಪಾವಳೆ ಎಂಬ ಇನ್ನೊಬ್ಬ ದಲಿತ ಸ್ತ್ರೀಯು ಆತ್ಮಕಥೆ ಬರೆದರು. ಆದರೆ ಅದೇನೂ ಅಷ್ಟು ಜನಮನ ಗೆಲ್ಲಲಿಲ್ಲ.

ಹೀಗೆ ಮರಾಠಿಯ ದಲಿತ ಸಾಹಿತ್ಯ ಅಗಾಧವಾಗಿದೆ. ಇಲ್ಲಿಯ ದಲಿತರು ಸಾಹಿತ್ಯದಲ್ಲಿ ಹೊಸ ಹೊಸ ಆವಿಷ್ಕಾರಗಳನ್ನು ಮಾಡುತ್ತಲಿದ್ದಾರೆ. ಹೊಸ ಹೊಸ ವಿಮರ್ಶೆಯ ಪರಿಭಾಷೆಗಳೂ ಅಲ್ಲಿ ಬರುತ್ತಲಿವೆ. ಸಾಹಿತ್ಯದಲ್ಲಿ ಸೌಂದರ್ಯವನ್ನೂ ಕಾಣ ಬಯಸುವಂತೆ ಕುರೂಪತೆಯನ್ನೂ ಅವರು ನೋಡಬಯಸುತ್ತಿದ್ದಾರೆ. ಅದರ ಪರಿಣಾಮವಾಗಿ ಅಲ್ಲಿ ಸಾವಿರಾರು ಪುಸ್ತಕಗಳು ದಲಿತ ಸಾಹಿತ್ಯದ ಮೇಲೆ ಬಂದಿವೆ. ಕಾಲಕಾಲಕ್ಕೆ ಈ ದಲಿತ ಸಾಹಿತಿಗಳು ತಮ್ಮನ್ನು ಕಾಲದ ಪರೀಕ್ಷೆಗೆ ಮತ್ತೆ ಮತ್ತೆ ಒಳಪಡಿಸಿಕೊಳ್ಳುವುದರಿಂದ ಅವರು ಬರೆದ ಸಾಹಿತ್ಯ ಕೆಂಡವಾಗಿ ಹೊರಬಂದು ಬೆಂಕಿಯಾಗಿ ಎಲ್ಲೆಡೆ ಧಗಧಗಿಸುತ್ತದೆ.

---

ದಲಿತ ಸಂಸ್ಕೃತಿ. ದಲಿತ ಲೇಖಕರು ಮತ್ತು ಕನ್ನಡ ದಲಿತ ಸಾಹಿತ್ಯ, ಈ ಸಂಬಂಧವನ್ನು ವಿವರಿಸುವಾಗ, ಸಾಹಿತ್ಯ ಕೃತಿಗಳ ಬಗೆಗಿನ ನಮ್ಮ ಅನೇಕ ಸಿದ್ಧ ಅಭಿಪ್ರಾಯಗಳನ್ನು ಅಥವಾ ಪೂರ್ವಾಗ್ರಹಗಳನ್ನು ಬಿಟ್ಟು ನಾವು ಮಾತಾಡಬೇಕಿದೆ. ಕರ್ನಾಟಕದ ಸಂದರ್ಭದಲ್ಲಿ ದಲಿತರು ಮೌಖಿಕ ಪರಂಪರೆಯಲ್ಲಿ ಶತಮಾನಗಳ ಉದ್ದಕ್ಕೂ ಕ್ರಿಯಾತ್ಮಕವಾಗಿ ತಮ್ಮನ್ನು ತೊಡಗಿಸಿಕೊಂಡರು. ಕನ್ನಡ ಜನಪದ ಸಾಹಿತ್ಯವನ್ನು ದಲಿತರ ಅಭಿವ್ಯಕ್ತಿಗಳಲ್ಲಿ ಸಮರ್ಪಕವಾಗಿ ಅಧ್ಯಯನ ಮಾಡುವ ಕೆಲಸ ಈವರೆಗೆ ನಡೆದಿಲ್ಲ. ಆದರೆ ಮುಕ್ತವಾಗಿ ಮತ್ತು ಗಟ್ಟಿಯಾಗಿ ತಮ್ಮ ಅಭೀಪ್ಸೆಗಳನ್ನು ದಲಿತರು ಮೌಖಿಕ ಪರಂಪರೆಯಲ್ಲಿ, ಕನ್ನಡದಲ್ಲಿ ಪ್ರಕಟಿಸಿದ್ದಾರೆ.

—ಡಾ|| ಬಿ. ಎ. ವಿವೇಕ ರೈ

(ಸಾಹಿತ್ಯ ಸಂಗಾತಿ, ಸಂ-೧, ಸಂ-೪, ಪುಟ-೩೮)

---

# ನಡುವೆ ನಿಂತ ಜನ

—ನಜೀರ್ ಚಂದಾವರ

ದೂಡಿ ಬಂದವರು ದೂರುತ್ತಾ ಬಂದರು
ಸುತ್ತ ಸುತ್ತುವರಿದು ಮುಷ್ಟಿ ಹೊಂಡ ತೋಡಿದರು
ನಡುವೆ ನಿಂತ ಜನ ಅಪರಾತ್ರಿಗೆ
ಸೂರ್ಯನಲಿ ಕಣ್ಣು ನೆಟ್ಟರು

ನಡೆದು ಬಂದರು ನಡುಗುತ್ತಾ ಬಂದರು
ಬೇಲಿ ಗೂಟದ ಮೇಲೊಂದು ಓತಿಕಾಟ
ಬುಡದಲಿ ಮುಳ್ಳು ಒಕ್ಕೆಗಳ ಕಂಡರು
ನಡುವೆ ನಿಂತ ಜನ
ಗೋಡೆಗೊರಗಿ ಕನಸು ಹೊದ್ದರು

ತಣಿದು ಬಂದರು ತಡಕಾಡುತ್ತಾ ಬಂದರು
ತುಟ್ಟಿಕಾಲ—ತುಟ್ಟಿಭತ್ಯೆ ಸಿಗಲಿಲ್ಲ
ನಡುವೆ ನಿಂತ ಜನ ತಬ್ಬಿಕೊಂಡರು
ಗಡಿಯಾರ ಗೋಪುರದಿಂದ ಇಳಿದ ನೆರಳು

ಬಗ್ಗಿ ಬಂದರು ಬಾಗಿ ಬಾಚುತ್ತಾ ಬಂದರು
ಮುಚ್ಚಿದ ಕಿಟಕಿ ಮತ್ತದೇ ಮುರುಕು ಕುರ್ಚಿ
ಕಾವು ಕೊಟ್ಟು ಕದದ ಸಂದಿಗೆ ಕಣ್ಣಿಟ್ಟರು
ನಡುವೆ ನಿಂತ ಜನ
ನೋಟಕ್ಕೆ ಸಿಗದ ಉದ್ದಗಲದಲಿ ಉಳಿದರು

ಸಲಾಮ್ ಹೇಳಿದರು ಸಬೂಬು ನೀಡಿದರು
ದಿನದ ಕೀರ್ದಿ—ನಾಳೆಯ ವರದಿಗಳ ಭಾಗಿಸಿ
ನಡುವೆ ನಿಂತ ಜನ ಉರಿಕಾರಲು
ಹಸಿ ಒಲೆಯ ಹೊಗೆಯುಂಡರು

ನಡುವೆ ನಿಂತ ಜನ
ತಿಂಗಳ ಮೊದಲು ಸಿನೆಮಾ ನೋಡಿ
ಮಾಹೆ ಆಖಿರ್ ಕೈಯು ಬೀಸಿ
ಮುಷ್ಟಿಯಲಿ ಗಾಳಿ ಹಿಡಿದು—ತೆರೆಗಳಿಗೆ ಗೆಜ್ಜೆ ಕಟ್ಟಿದರು

ಬಾಡಿಗೆ ಪೇಪರ್ ತುಂಬ ಹುಡುಕಿದರು
ನಾಡು ಬಾಂಬು, ಸಾವು, ಚಿತ್ಕಾರಗಳು
ಯಾವುದೋ ಘೋಷಣೆ ಯಾರದೋ ಶೋಷಣೆ
ಎಲ್ಲ ಬದಿಗಿಟ್ಟು ಕನಸುತ್ತಾ
ಹ್ಯಾಂಗರ್‌ಗೆ ಜೋತು ಬಿದ್ದರು

ನಡುವೆ ನಿಂತ ಜನ
ಎರವಲು ಕನಸುಗಳಿಗೆ ಕಟ್ಟುತ್ತಾ
ಹೋದರು ಸ್ವಂತದ ಕಂತುಗಳ

ಆದರೆ ಹೊಂಡದಲಿ ಉರುಳಿ ಬಿದ್ದಿಲ್ಲ,
ಆಕಾಶ ಕೈಗೆ ನಿಲುಕಲಿಲ್ಲ.

## ಒದ್ದೆ ಎವೆಗಳ ಸುತ್ತ

—ವಿನಯಾ ನಾಯಕ್

ಒದ್ದೆ ಎವೆಗಳ ಸುತ್ತ
ತುಂಬಿ ತುಳುಕುವ ನೆನಪು
ಹುಟ್ಟು ಕಟ್ಟಿದ ಪ್ರೀತಿ ತೊಟ್ಟಿಕ್ಕಿದಂತೆ.

(ಎದುರಲ್ಲಿ—ಉನ್ಮತ್ತ ಪ್ರಣಯ ಕೇಳಿ)
ಮೇಘರಾಜನ ಕರಡಿಯುಪ್ಪುಗೆಯಲ್ಲಿ
ಕಿಲಕಿಲ ನಗುವ ಇಳೆ
ಮೊದಲ ಬೇಟದ ಮಿಂಚು-ಸಂಚು
ರೋಮಾಂಚನದ ಸಿಡಿತವೆಲ್ಲ ಮಟಾಮಾಯವೀಗ

ಕಾವಾರಿಸಿ ತಂಪೇರಿಸಿ
ಹಸಿರುಕ್ಕಿಸಿದ ಸುರಿತ—ಸತತ
ಒಲೆಯು ಒಣ ಕಟ್ಟಿಗೆಗೂ
ಜುಮುಗುಟ್ಟಿಸುವ ತಂಪು !

ಕೊಳೆವ ಬದುಕಿಗೆ ಕಣ್ತುಂಬುವ
ವಿರಹಿಣಿ—ಸೂರ್ಯಪಾನ.

ನಿಯತಕಾಲಿಕದ ತೆಕ್ಕೆಯಲಿ
ತೆವಳುವ ಬದುಕು
ರಾತ್ರಿ ಗವ್ವನೆ ಗಪ್ಪಲ್ಲಿ
ಮುಗುಳೊಡೆವ ಕನಸು—
ಮೈತುಂಬ ಮಿಂಚುಹುಳ ಮಿಸುಕಾಡಿದಂತೆ

ದಿನಕಳೆದು ದಿನ ಹುಟ್ಟುವಾಗ
ಕನಸ ಗರ್ಭಕ್ಕೆ ಬಸಿರಾದ ಕತ್ತಲಿಗೆ
ಗರ್ಭಪಾತ.

ಗೊತ್ತಿದ್ದೂ ಅನಾಥ ಮಗ್ಗುಲಲಿ
ಕನಸು ತಬ್ಬಿ ಬೆಚ್ಚಗಾಗುತ್ತೇನೆ.
ಆದರೆ, ಈಗೀಗ
ಕನಸುಗಳಿಗೂ ಸುನೇರಿ ರಂಗಿಲ್ಲ
ತೊಟ್ಟಿಲ ತಬ್ಬಲಿತನದ
ಕಪ್ಪು ಬಿಳಿ ನೆನಪುಗಳಂತೆ
ಮಿದುಳ ಪರಿಧಿಗುಂಟ ಸರಿವ
ಸ್ತಬ್ಧ ಚಿತ್ರ ಮಾತ್ರ !

ಒದ್ದೆ ಎವೆಗಳ ಸುತ್ತ
ತುಂಬಿ ತುಳುಕುವ ನೆನಪು
ಹುಟ್ಟು ಕಟ್ಟಿದ ಪ್ರೀತಿ-ತೊಟ್ಟಿಕ್ಕಿದಂತೆ—

# ವಾಸ್ತವ

—ಶೋಭಾರಾವ್

ನಿಜ ಹೇಳಬೇಕಾದರೆ
ದ್ವೇಷಗಳಿಗೆ ಬಣ್ಣವಿರಲಿಲ್ಲ.

ವಿನಾ ಕಾರಣ ಕಾಡಿ ತಮಾಶೆ
ನೋಡಬೇಕೆಂಬ ಛಲವಿತ್ತು !

ನೂರು ಪ್ರೀತಿಯ ಮಾತುಗಳು
ನನ್ನ ಮುಂದೆ ಹರವಿ ನಗುತ್ತಿದ್ದವು

ಆಗ-ನನ್ನೊಳಗಿನ ಅಳು ಮಹಾಪೂರಕ್ಕೊಂದು
ಧ್ವನಿಯಿತ್ತು-ಭರವಸೆಯಿತ್ತು

ಪ್ರೀತಿ ಎಂದೋ ಚಿಗುರಿತ್ತು
ನೀ-ನೀರಿಲ್ಲದಿದ್ದರೂ ಕ್ಯಾಕ್ಟಸ್ಸಿನಂತೆ ಬೆಳೆದಿತ್ತು.

ಅದಕ್ಕೆ ಹಾಗೆ—
ನಿನ್ನನ್ನು ಪ್ರೀತಿಸುತ್ತಿದ್ದೆ
ದ್ವೇಷಿಸಿದಂತೆ ಸುಮ್ಮನೆ ನಟಿಸುತ್ತಿದ್ದೆ.

ಕಾಲ ಯಾರನ್ನೂ ಕಾಯುವದಿಲ್ಲ
ನೊಂದ ನಾ ಏನೂ ಕಾರುವದಿಲ್ಲ.

ಇಷ್ಟೇ ಕೂಗಿ ಹೇಳುತ್ತೇನೆ:
ನನ್ನೊಳಗಿನ ದ್ವೇಷಗಳಿಗೆ
ಯಾವ ಬಣ್ಣಗಳೂ ಇರಲೇ ಇಲ್ಲ.

ಬಂಡಾಯ ಮನೋಧರ್ಮ

# ಮಾರ್ಕ್ಸ್, ಲೋಹಿಯಾ, ಅಂಬೇಡ್ಕರ್ ಹಿನ್ನೆಲೆಯಲ್ಲಿ

—ಎಸ್. ವೆಂಕಟ ವಿಶ್ವನಾಥ
(ಹರಿಹರಪ್ರಿಯ)

ಪ್ರಬಂಧದ ವಿಷಯವೇ ಒಂದು ಬಗೆಯ ಚೌಕಟ್ಟನ್ನು ನಿರ್ಮಿಸಿದೆ ಎಂದು ತಿಳಿಯುತ್ತೇನೆ. ಮಾರ್ಕ್ಸ್, ಲೋಹಿಯಾ, ಅಂಬೇಡ್ಕರ್ ಅವರ ವಿಚಾರಗಳ ಹಿನ್ನೆಲೆಯಲ್ಲಿ ಬಂಡಾಯ ಮನೋಧರ್ಮವನ್ನು ಗುರುತಿಸಿಕೊಳ್ಳುವುದು, ಒಂದು. ಎರಡನೆಯದು ಆ ಚಿಂತಕರು ದೇಶ ಮತ್ತು ಅಂತರರಾಷ್ಟ್ರೀಯ ಹಿನ್ನೆಲೆಯಲ್ಲಿ ತಮ್ಮ ಚಿಂತನೆಗಳನ್ನು ನೆಚ್ಚಿದ್ದರೂ, ಕನ್ನಡದ ಸಂದರ್ಭದಲ್ಲಿ ಅವರ ಪ್ರಭಾವ-ಪ್ರೇರಣೆಗಳನ್ನು ಚಾರಿತ್ರಿಕ ನೆಲೆಯಲ್ಲಿ ವಿಶ್ಲೇಷಿಸಿಕೊಳ್ಳುವ ಪುಟ್ಟ ಪ್ರಯತ್ನವನ್ನು ಮಾಡಹೊರಡುತ್ತಿದ್ದೇನೆ. ಹೀಗಾಗಿ, ಆ ಚಿಂತಕರ ಚಿಂತನೆಯ ಸ್ಥೂಲ ಸಾರಸಂಗ್ರಹ, ನಮ್ಮ ಸಂದರ್ಭದಲ್ಲಿ ಅದರ ಬಿತ್ತನೆ, ಬೆಳವಣಿಗೆ, ಪರಸ್ಪರ ನಂಟುಗಂಟುಗಳ ಜೊತೆಗೇ ಪ್ರಸ್ತುತ ಚಳುವಳಿಯ ಅನಿವಾರ್ಯತೆ, ಬಿಕ್ಕಟ್ಟು ಹಾಗೂ ಮುಂದಿನ ಹೆಜ್ಜೆಯನ್ನು ನಿರ್ಣಯಿಸಿಕೊಳ್ಳುವ ದಿಸೆಯಲ್ಲಿ ಈ ಪ್ರಬಂಧವನ್ನು ರೂಪಿಸಿಕೊಳ್ಳುತ್ತಿದ್ದೇನೆ.

ಕರ್ನಾಟಕದ ಸದ್ಯದ ರಾಜಕೀಯ–ಸಾಮಾಜಿಕ ಪರಿಸ್ಥಿತಿ ಏನಿದೆಯೋ, ಅಂತಹ ಸ್ಥಿತಿಯೇ 1848ರಲ್ಲಿಯೂ ಯೂರೋಪಿನಲ್ಲಿ ಇದ್ದು, ಹಲವು ಕನಸುಗಳ ಸಮಾಜವಾದದ ನಡುವೆ ಜನ್ಮ ತಳೆದದ್ದು ಮಾರ್ಕ್ಸ್‌ವಾದ. ಅದು ಭಾರತಕ್ಕೆ ಅಷ್ಟು ಸಲೀಸಾಗಿ ನಡೆದುಬಂದಂತೆ ಕಾಣುತ್ತಿಲ್ಲ. ಆಗೀಗ್ಗೆ ನಮ್ಮ ನೆನಪಿಗೆ ಇಳಿದು ಬರುವ ಬೌದ್ಧಿಕ ಮಟ್ಟದಲ್ಲೇ ನೆಲೆನಿಂತ ಎಂ. ಎನ್. ರಾಯ್ ಅವರ ಮೂಲಕ, 1919ರಲ್ಲಿ 'ಭಾರತ ಕಮ್ಯುನಿಸ್ಟ್' ಪಕ್ಷ ತಲೆ ಎತ್ತಿದ್ದು ತಾಷ್ಕೆಂಟಿನಲ್ಲಿ. ಅಲ್ಲಿಂದ ಪ್ರಾರಂಭವಾದದ್ದು, 1928ರ ಹೊತ್ತಿಗೆ ಅಖಿಲ ಭಾರತ ಪ್ರಗತಿಶೀಲ ಬರಹಗಾರರ ಚಟುವಟಿಕೆಯ ಮೂಲಕ ಅಂತರ ವಾಹಿನಿಯಾಗಿ ಹರಿಯತೊಡಗಿ, 1943ರಲ್ಲಿ ಕರ್ನಾಟಕಕ್ಕೂ ಪ್ರವೇಶಿಸಿತು. ಬರವಣಿಗೆಯಲ್ಲಿ ಅಥವಾ ಬರಹಗಾರರಲ್ಲಿ ಮೂಡಿದ ಈ ಪ್ರಗತಿಶೀಲ ಮನೋಧರ್ಮ ಮತ್ತು ಪ್ರಗತಿಶೀಲ ಎನ್ನಿಸಿಕೊಳ್ಳಬಹುದಾದ ಅನುಕಂಪಗಳು ; ರಾಜಕೀಯ, ಸಾಮಾಜಿಕ, ಆರ್ಥಿಕ, ಶಿಕ್ಷಣ ರಂಗಗಳಲ್ಲಿ ಮಾಡಿದ ಸಾಧನೆ ಏನು ಎಂಬುದರ ಬಗ್ಗೆ ನನಗೆ ಸ್ಪಷ್ಟ ಮಾಹಿತಿ ಸಿಕ್ಕಿಲ್ಲ. ಆದರೆ, ಅಷ್ಟು ಹೊತ್ತಿಗಾಗಲೇ ಅಂಬೇಡ್ಕರ್ ಅವರ ಸಮಾನತಾವಾದ ಎಂದು ಕರೆಯಬಹುದಾದ ವಿಚಾರಗಳು, ಹಿಂದು ಬಹಿಷ್ಕಾರ-ಖಾಸಲಾತಿ ಚಳುವಳಿಗಳು ಕಾಣಿಸಿಕೊಂಡಿದ್ದು,

ಇನ್ನೊಂದು ಬದಿಗೆ ಕಾಂಗ್ರೆಸ್ ಸಮಾಜವಾದಿ ಪಕ್ಷ ದೇಶದಲ್ಲಿ ತಲೆ ಎತ್ತಿತ್ತು ಎಂಬುದನ್ನು ಮರೆಯುವಂತಿಲ್ಲ. ಇವುಗಳ ಬಗ್ಗೆ ಪ್ರಗತಿಶೀಲರ ಪ್ರತಿಕ್ರಿಯೆ ಏನಾಗಿತ್ತು ಅಥವಾ ಮೌನಕ್ಕೆ ಅವರ ಕಾರಣಗಳು ಏನು ಎಂಬುದರ ಅಧ್ಯಯನ ಕೂಡ ನನಗೆ ಕುತೂಹಲ ತಂದಿದೆ.

ಹಳೆಯ ಮೈಸೂರಿನ ವಿಷಯಕ್ಕೆ ಬಂದರೆ, ಒಂದು ಕಡೆಗೆ ಸಾಮ್ರಾಜ್ಯಶಾಹಿ ಬ್ರಿಟಿಷರಿಗೆ, ಅಂತೆಯೇ ಪಾಳೆಯಗಾರರ ಮುಂದುವರಿದ ರೂಪದಾದ ಮೈಸೂರು ಅರಸಿಗೆ ಗುಲಾಮರಾಗಿ ಬದುಕಿದ್ದ ಪರಿಸರದಲ್ಲಿ, ಪ್ರಗತಿಶೀಲ ಚಳುವಳಿ ತಲೆ ಚಾಚಲಿಕ್ಕೆ ಹೊರಟಿದ್ದು ಎಂಬುದನ್ನು ಇಲ್ಲಿ ಗಮನಿಸಬೇಕು. ಕಾರ್ಮಿಕರಿಗೆ ರಾಜಕೀಯ, ಆರ್ಥಿಕ, ಸಾಮಾಜಿಕ ತಿಳುವಳಿಕೆ ಮೂಡಿಸಿ, ಬಂಡವಾಳಶಾಹಿಗಳನ್ನು ಎದುರಿಸಿ, ರಾಜಕೀಯ ಅಧಿಕಾರವನ್ನು ಗಳಿಸಿ, ವರ್ಗರಹಿತ ಸಮಾಜ ನಿರ್ಮಾಣ ಮಾಡಿ ಸುಖ ಸಂಪತ್ತು ಪಡೆಯಲು ಸಾಧ್ಯ ಎನ್ನುವ ಮಾರ್ಕ್ಸ್‌ವಾದವನ್ನು, ನಮ್ಮ ಪ್ರಗತಿಶೀಲ ಬರಹಗಾರರು ಕೇವಲ ಬರವಣಿಗೆಯ ಮೂಲಕವಲ್ಲದೆ ಹಮ್ಮಿಕೊಂಡ ಕಾರ್ಯ ವ್ಯಾಪ್ತಿ ಏನು ಎಂಬುದು ತಿಳಿಯುತ್ತಿಲ್ಲ. ಬರಹಗಾರರಲ್ಲದೆ ಕಮ್ಯುನಿಸ್ಟ್ ಪಕ್ಷದ ಸಕ್ರಿಯ ಕಾರ್ಯಕರ್ತರು, ಹೆಚ್ಚಿನ ಮಟ್ಟಿಗೆ ಮದರಾಸು ಕರ್ನಾಟಕದ ಪ್ರಾಂತ್ಯದಲ್ಲಿ ಓಡಾಡಿ ಜನಜಾಗೃತಿ ಕೆಲಸ ನಡೆಸಿದರೆಂದು ಬಲ್ಲೆನಾದರೂ, ಖಚಿತ ಮಾಹಿತಿ ಒದಗಿಸುವ ಅವಕಾಶ ಸದ್ಯಕ್ಕೆ ಇಲ್ಲವಾಗಿದೆ. ಇಲ್ಲಿ, ಮಾರ್ಕ್ಸ್‌ವಾದವನ್ನು ಕರ್ನಾಟಕದಲ್ಲಿ ತರಬಯಸಿದ ನಮ್ಮ ಆ ಎಲ್ಲ ಮಿತ್ರರು, ಆವರೆಗಿನ ಹಾಗು ಅಂದಿನ ಚಾರಿತ್ರಿಕ— ಸಾಮಾಜಿಕ ನೆಲೆಗಳನ್ನು ಗ್ರಹಿಸಿದ್ದರೇ ? ಹಾಗಿದ್ದಲ್ಲಿ ಮಾರ್ಕ್ಸ್‌ವಾದ ಈ ಜನಕ್ಕೆ ಕ್ಷೇಮಂಕಾರಿ ಎಂದು ಮನಗಂಡಿದ್ದರೇ ? ಎಂಬ ಪ್ರಶ್ನೆಗಳು ಎದುರಾಗುತ್ತವೆ.

ಈ ಪ್ರಶ್ನೆಗಳನ್ನು ಎತ್ತುವ ಉದ್ದೇಶವಿಷ್ಟೆ: ಇವತ್ತಿನ ಸಮಾಜದ ಅರ್ಥ ಗ್ರಹಿಕೆಗೆ ಬೀಜಾವಾಪನೆಯಾದ ಸಂದರ್ಭ, ಆ ನಂತರದ ಬೆಳವಣಿಗೆಗೆ ನೆರವಾಗಿ ಬಂದೀತು, ಹಾಗು ಭವಿಷ್ಯದ ತಿಳಿವಳಿಗೆ ಪೂರ್ವನೆಲೆಗಟ್ಟಾದೀತು ಎಂಬ ನಂಬುಗೆಯಿಂದ.

1900 ಸುಮಾರಿನ, ಮೈಸೂರಿನಲ್ಲಿದ್ದ ಶೈಕ್ಷಣಿಕ ವಾತಾವರಣದ ಒಂದು ತುಣುಕು ಹೀಗಿದ್ದು, ಸದ್ಯದ ಸಾಮಾಜಿಕ ಪರಿಸ್ಥಿತಿ ಮೇಲೆ ಬೆಳಕು ಚೆಲ್ಲುವಂತಿದೆ. ಒಕ್ಕಲಿಗರಲ್ಲಿಯೇ ಮೊದಲನೆಯವರಾಗಿ ಬಿ.ಎ. ಪದವಿಯನ್ನು 1895ರಲ್ಲಿ ಪಡೆದು, 1906ರಲ್ಲಿ ಒಕ್ಕಲಿಗರ ಸಂಘ ಸ್ಥಾಪನೆಗೆ ಕಾರಣ (ಪೂ : ರೂ) ಆದ ಬಿ. ಎನ್. ಚೆನ್ನಿಗಪ್ಪನವರು ತಮ್ಮ ಚಿಕ್ಕಪ್ಪನವರ ಹೆಣ್ಣುಮಕ್ಕಳನ್ನು ಶಾಲೆಗೆ ಸೇರಿಸಲು ಎಂಥ ಹೋರಾಟಕ್ಕೆ ಇಳಿಯಬೇಕಾಯಿತು ಎಂಬುದನ್ನು ಬಿ. ಪಿ. ರಾಧಾಕೃಷ್ಣ ಅವರು ಹೀಗೆ ದಾಖಲಿಸುತ್ತಾರೆ :

"ಈ ಮಧ್ಯೆ ಮಹಾರಾಣಿ ಶಾಲೆಯಲ್ಲಿ ಮುಂದೆ ಓದಬೇಕೆಂದು ಹೋದ ಇಬ್ಬರು ಹೆಣ್ಣು ಮಕ್ಕಳಿಗೂ ಅಲ್ಲಿ ಸ್ಥಳ ದೊರೆಯದೆ ಹೋಗಿ ತೀರ ಕಷ್ಟದ ದೆಸೆಯೇ ಬಂದಂತಾಯಿತು. ಮೊದಲು ಇವರನ್ನು ಶಾಲೆಗೆ ಸೇರಿಸಿದರಾದರೂ ಆಮೇಲೆ ಇವರು ಶೂದ್ರರೆಂದು ಗೊತ್ತಾದಮೇಲೆ ಶಾಲೆಯಲ್ಲಿ ಇರಿಸಿಕೊಳ್ಳದೆ ಮನೆಗೆ ಕಳುಹಿಸಿಬಿಟ್ಟರು. ಆಗ ಮಹಾರಾಣಿ ಶಾಲೆಗೆ ಮಹಾರಾಣೀಸ್ ಹೈ ಕ್ಲಾಸ್ಟ್ ಗರ್ಲ್ಸ್ ಸ್ಕೂಲ್ ಎಂದೇ ಹೆಸರಿತ್ತಂತೆ. ಬ್ರಾಹ್ಮಣರಲ್ಲದವರಿಗೆ ಆ ಶಾಲೆಯಲ್ಲಿ ಸ್ಥಳ ಸಿಗುತ್ತಿರಲಿಲ್ಲ. ಸ್ಥಳ ಕೇಳಲು ಹೋದವರಲ್ಲಿ ನಮ್ಮ ತಂದೆಯ ತಂಗಿಯರೇ ಮೊದಲಿನವರು. ಅದುವರೆಗೆ ಯಾರಾ ದರೂ ಸ್ಥಳ ಕೇಳಲು ಹೋಗಿ ಇಲ್ಲವೆನಿಸಿಕೊಂಡು ಬಂದಿದ್ದರೊ ಇಲ್ಲವೋ ನನಗೆ ತಿಳಿಯದು. ನನ್ನ ಸೋದರತ್ತೆಯರಂತೂ ಇಲ್ಲ ಎನಿಸಿಕೊಂಡು ಬಂದು ಮನೆಯಲ್ಲಿ ಕುಳಿತರು. ಈ ಅನ್ಯಾಯವನ್ನು ತಡೆದುಕೊಂಡು ಸುಮ್ಮನಿರುವುದು ಅವರ ತಂದೆಗೆ ಆಗದೆ ಹೋಯಿತು. ಚೆನ್ನಿಗಪ್ಪನವರನ್ನು ಮುಂದೆ ಮಾಡಿಕೊಂಡು ಮುಖ್ಯವಾದವರನ್ನು ಕಂಡರು. ದೊಡ್ಡ ಗೊಂದಲವೆಬ್ಬಿಸಿದರು. ಬ್ರಾಹ್ಮಣ ರಲ್ಲದ ಹಿಂದುಳಿದವರ ಸ್ಥಾನಮಾನಗಳಿಗೆ ಹೊಡೆದಾಡಿ ಹೆಸರು ಗಳಿಸಿದ್ದವರ ಸಹಾಯವನ್ನು ಪಡೆದು ಕೊಂಡರು. ಈ ಎಲ್ಲ ಮಹನೀಯರುಗಳು ಶ್ರಮಿಸಿದುದರ ಫಲವಾಗಿ ಇತರ ಜಾತಿಯ ಹೆಣ್ಣು ಮಕ್ಕಳಿಗೂ ಮಹಾರಾಣಿ ಶಾಲೆ ಸೇರಲು ಅವಕಾಶ ದೊರೆಯಿತು. ಆಗಲೂ ಸಹ ಗೌರವಸ್ಥರಾದ ಹೆಣ್ಣುಮಕ್ಕಳನ್ನು ಮಾತ್ರ ಸೇರಿಸಬೇಕೆಂದು ಒಂದು ಷರಾ ಬೇರೆ ಸೇರಿಸಲಾಯಿತು. ನಮ್ಮ ಸೋದರತ್ತೆಯರನ್ನು ಗೌರವಸ್ಥರೆಂದು ಎಣಿಸಿದರೆಂದೇ ಕಾಣುತ್ತದೆ. ಅಂತೂ ಅಷ್ಟೆಲ್ಲ ಗಲಾಟೆ ಮಾಡಿದ ಮೇಲೆ ಶಾಲೆಯನ್ನು ಪ್ರವೇಶಿಸಿ ತಮ್ಮ ವಿದ್ಯಾಭ್ಯಾಸ ಮುಂದುವರಿಸಿದರು."

ಇದಿಷ್ಟೂ ಮಹಾರಾಜರ, ಬ್ರಿಟಿಷರ ಆಡಳಿತ ಕಾಲದಲ್ಲಿ ಇದ್ದದ್ದು ಎಂಬು ದನ್ನು ಇಲ್ಲಿ ನೆನಪಿಸಬಯಸುತ್ತಿದ್ದೇನೆ. ಅದಕ್ಕೂ ಮುಖ್ಯ, ಇನ್ನಿತರ ಕೆಳವರ್ಗದವರ ಸ್ಥಿತಿ ಆಗ ಏನಾಗಿದ್ದಿರಬಹುದು ಎಂಬುದನ್ನು ಊಹಿಸಿಕೊಳ್ಳಲು ಕೋರುತ್ತೇನೆ.

ಈಗ ಕೊಡಬಯಸುವ ಇನ್ನೊಂದು ತುಣುಕು, ಅಂದಿನ ರಾಜ್ಯ ಆಡಳಿತಕ್ಕೆ ಸಂಬಂಧಿಸಿದ್ದು. ಇವತ್ತಿನ ಹಲವು ಸಮಸ್ಯೆಗಳಿಗೆ ಮೂಲವಾದ ಸಂಗತಿಗಳು ಅಲ್ಲಿಂದಲೇ ಹುಟ್ಟಿಕೊಂಡಂಥದ್ದು. ಹಾಗು ಮುಖ್ಯವಾಗಿ, ಪುರೋಹಿತಶಾಹಿ ವಕಾಲತ್ತುದಾರರಾದ ಡಿ. ವಿ. ಗುಂಡಪ್ಪ ಅವರ ಮಾತುಗಳ ಒಳಗೇ ಇದಿಷ್ಟೂ ಅಡಕ ವಾಗಿದೆ ಎಂಬುದು :

"ಶೇಷಾದ್ರಿ ಅಯ್ಯರ್ ಅವರ ವಿಷಯದಲ್ಲಿದ್ದ ಮೊದಲನೆಯ ತಕರಾರು ಅವರ ಪ್ರಜಾಧಿಕಾರ ನಿರಾಕರಣೆಯನ್ನು ಕುರಿತದ್ದಾದರೆ, ಎರಡನೆಯದು ಅವರು ಮದರಾಸಿನವರಿಗೆ ಕೊಟ್ಟ ವಿಶೇಷಾಶ್ರಯ ವನ್ನು ಕುರಿತದ್ದು. ಶೇಷಾದ್ರಿ ಅಯ್ಯರ್ ಅವರಿಗೆ ಮೊದ ಮೊದಲು ಮೈಸೂರಿಗರಲ್ಲಿದ್ದ ಪರಿಚಯ ಕೊಂಚದ್ದಾಗಿತ್ತು. ಎರಡನೆಯದಾಗಿ, ಮೈಸೂರಿಗರಲ್ಲಿ ಅಂಥ ಸಮರ್ಥ ಜನ ಹೆಚ್ಚಾಗಿರಲಿಲ್ಲ ಆಗ. ಇಂಗ್ಲಿಷ್ ವಿದ್ಯಾಭ್ಯಾಸ ಪ್ರಾರಂಭವಾದದ್ದು ಮದರಾಸಿನಲ್ಲಿ ತಾನೆ ? ಆ ಕಾರಣದಿಂದ ಮದರಾಸು, ಕುಂಭಕೋಣ ಮೊದಲಾದ ಕಡೆಗಳಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸ ಹೆಚ್ಚಾಗಿ ಹರಡಿತ್ತು. ಈ ಕಾರಣ ಗಳಿಂದ ಶೇಷಾದ್ರಿ ಅಯ್ಯರವರು ಕೆಲಮಂದಿ ಮದರಾಸಿನವರನ್ನು ಮೈಸೂರಿಗೆ ಕರೆಸಿಕೊಂಡದ್ದುಂಟು. ಅವರು ದೊಡ್ಡ ದೊಡ್ಡ ಹುದ್ದೆಗಳನ್ನು ಆಕ್ರಮಿಸಿಕೊಂಡದ್ದೂ ಉಂಟು : ಈ ಆಶ್ರಿತರ ಹಿಂಬಾಲಕ ರಾಗಿ ಬಂದವರು-ಅಮ್ಮಿಲಿ ಅಪ್ಪಿಲಿ ಅಪ್ಪಿಲಿ-ಹೀಗೆ ಅಡಿಗೆಯವರು, ಪರಿಚಾರಕರು, ಸಣ್ಣಪುಟ್ಟ ಗುಮಾಸ್ತೆಗಳು, ಕಾರಕೂನರು ಎಲ್ಲರೂ ತಮಿಳರಾದರು. ಮೈಸೂರಿಗರಿಗೆ ತಮ್ಮ ಮನೆ ಅನ್ಯಾಕ್ರಾಂತ

ವಾಯಿತೆಂದು ಅಸಮಾಧಾನವಾದದ್ದು ಅನ್ಯಾಯವಾದದ್ದು ಅನ್ಯಾಯವೆಂದು ಯಾರೂ ಹೇಳರು ಹೀಗೆ ಬೆಳೆಯಿತು 'ಮೈಸೂರಿಯನ್ ವರ್ಸಸ್ ಮದರಾಸಿ' ಎಂಬ ಕಲಹ. ಇದು ಕೆಲವು ವರ್ಷ ಬೆಂಕಿಯ ಉರಿಯಂತೆಯೇ ಇತ್ತು. ಕಾಲಕ್ರಮದಲ್ಲಿ ಆ-ಮೈಸೂರಿಗರು ಮೈಸೂರು ದೇಶವಲ್ಲಿ ಸ್ಥಿರವಾಗಿ ನೆಲಸಿದ್ದರಿಂದ ಹುಟ್ಟು ಮೈಸೂರಿಗರೇ ಆಗಿಬಿಟ್ಟರು. ವಿಶ್ವೇಶ್ವರಯ್ಯನವರ ಕಾಲದಲ್ಲಿ ಈ ವಿವಾದ ಮುಗಿಯಿತು.

ಇದು ನಡೆದಿದ್ದು ಅಯ್ಯರ್ ಅವರು ಮೈಸೂರಿಗೆ ಎರಡನೇ ದಿವಾನರಾಗಿ 1883 ರಿಂದ 1900ರವರೆಗೆ ಇದ್ದಾಗ. ಡಿ.ವಿ.ಜಿ. ಪ್ರಕಾರ ವಿಶ್ವೇಶ್ವರಯ್ಯನವರ ಕಾಲಕ್ಕೇ ಈ ವಿವಾದ ಮುಗಿಯಿತು ಎನ್ನುವ ಮಾತಿನ ಅರ್ಥ. ಅವರು ದಿವಾನಗಿರಿಯಿಂದ ಇಳಿದ 1918ರವರೆಗೆ ಎಂದು ತಾನೇ ? ಅದೇ ಡಿ.ವಿ.ಜಿ.ಯವರು ದಾಖಲಿಸುವ, 4ನೇ ದಿವಾನರಾಗಿ 1901ರಿಂದ 1906ರವರೆಗೆ ಇದ್ದ ಸರ್ ಪಿ.ಎನ್. ಕೃಷ್ಣಮೂರ್ತಿಯವರ ಕಾಲದ ವಾತಾವರಣವನ್ನು ಇಲ್ಲಿ ಗಮನಿಸಬೇಕು :

"ಕೃಷ್ಣಮೂರ್ತಿಗಳವರ ಕಾಲದಲ್ಲಿ ಮಾಧ್ವ ಬ್ರಾಹ್ಮಣರು ಪ್ರಬಲಿಸಿದರೆಂದು ಜನ ಆಡಿಕೊಂಡದ್ದುಂಟು. ಆದರೆ ಅದಕ್ಕೆ ಕಾರಣರು ಕೃಷ್ಣಮೂರ್ತಿಗಳವರಲ್ಲ ಎಂದು ನಾನು ತಿಳಿದುಕೊಂಡಿದ್ದೇನೆ. ಕೃಷ್ಣಮೂರ್ತಿಗಳವರು ಅವರ ಸ್ವಂತ ಮನೋಭಾವದಲ್ಲಿಯಾಗಲಿ ಆಡಳಿತದ ವಿಚಾರಗಳಲ್ಲಿಯಾಗಲಿ ತಿಳಿದು ತಿಳಿದು ಪಕ್ಷಪಾತ ಮಾಡಿದವರಲ್ಲ. ಗುಣಕ್ಕೆ ಸಲ್ಲುವ ಸ್ಥಾನಕ್ಕೆ ಗುಣಹೀನನನ್ನು ತಂದವರಲ್ಲ. ಆದರೆ ಒಂದು ವಿಶೇಷ, ಕೃಷ್ಣಮೂರ್ತಿಗಳ ಸುತ್ತಮುತ್ತ ಇದ್ದ ಪರಿವಾರವನ್ನು ನೋಡಿದರೆ ಕೊಂಚ ಸಂದೇಹಕ್ಕೆ ಆಸ್ಪದ ಇರುತ್ತಿತ್ತು.

ಜನ ಆಡಿಕೊಳ್ಳುವುದಕ್ಕೂ, 'ಗುಣಕ್ಕೆ ಸಲ್ಲುವ ಸ್ಥಾನಕ್ಕೆ ಗುಣಹೀನನನ್ನು ತಂದವರಿಲ್ಲ' ಹಾಗು 'ಸುತ್ತಮುತ್ತ ಇದ್ದ ಪರಿವಾರವನ್ನು ನೋಡಿದರೆ ಕೊಂಚ ಸಂದೇಹಕ್ಕೆ ಆಸ್ಪದ ಇರುತ್ತಿತ್ತು' ಎಂಬ ಮಾತುಗಳಿಗಾಗಿ ಇರುವ ಅಭೇದವೇನು ? ಪರಿಸ್ಥಿತಿ 1883 ರಿಂದ 1918ರವರೆಗೆ, ಅಂದರೆ ಸತತವಾಗಿ 35 ವರ್ಷಗಳು ಹೀಗೆ ಅಧಿಕಾರ ಆಶ್ರಯಿಸಿಕೊಂಡ ಒಂದೇ ವರ್ಣದವರಿಂದ ಸಾಮಾಜಿಕ ಜೀವನದಲ್ಲಿ ಆಗಿರಬಹುದಾದ ಪರಿಣಾಮ ಆಕಸ್ಮಿಕವೊ ಅಚಾತುರ್ಯದಿಂದ ನಡೆದಿರುವಂಥಾದ್ದೇನಲ್ಲವಷ್ಟೆ ?

ಇವುಗಳಿಂದ ಹದಗೆಟ್ಟ ಸಮಾಜಕ್ಕೆ ಪ್ರತಿಕ್ರಿಯಾತ್ಮಕವಾಗಿ, ಪ್ರತಿಭಟನಾತ್ಮಕವಾಗಿ ಎದ್ದು ನಿಂತದ್ದೇ ಒಕ್ಕಲಿಗರ ಸಂಘ. ಈಗಾಗಲೇ ಪ್ರಸ್ತಾಪಿಸಿದ ಬಿ. ಎನ್. ಚೆನ್ನಿಗಪ್ಪ ಅವರು, ಕೆ. ಎಚ್. ರಾಮಯ್ಯ, ಬೆಂಗಳೂರು ಪುಟ್ಟಯ್ಯ ಮುಂತಾದವರನ್ನು ಕೂಡಿಹಾಕಿಕೊಂಡು 1906ರಲ್ಲಿ ಸಂಘವನ್ನು ಕಟ್ಟಿದರು. ಜೊತೆಗೆ 1909ರಲ್ಲಿ ಮೈಸೂರಿನ ಮಹಾರಾಜ ಕಾಲೇಜಿಗೆ ಪ್ರಾಧ್ಯಾಪಕರಾಗಿ ಡಾ|| ಕಟ್ಟಮಂಚಿ ರಾಮಲಿಂಗಾರೆಡ್ಡಿ (ಸಿ. ಆರ್. ರೆಡ್ಡಿ ಎಂದೇ ಖ್ಯಾತಿ) ಅವರು ಬಂದದ್ದು, ಮೈಸೂರಿನ ಶೂದ್ರ ಜನಾಂಗದ ಹೋರಾಟಕ್ಕೆ ಹೊಸ ಮಗ್ಗಲು ದೊರಕಿದಂತೆ ಆಯಿತು. ಕೇವಲ ಪ್ರಾಧ್ಯಾಪಕ ಮಾತ್ರವೆ ಅಲ್ಲದೆ ಶೂದ್ರ ಜನಾಂಗದಿಂದಲೇ ಬಂದ ರೆಡ್ಡಿಯವರು,

ಆಗ್ಗೇ ಕೇಂಬ್ರಿಜ್ ವಿಶ್ವವಿದ್ಯಾಲಯದಲ್ಲಿ ತತ್ವಶಾಸ್ತ್ರ, ಇತಿಹಾಸ, ಅರ್ಥಶಾಸ್ತ್ರಗಳಲ್ಲಿ ಉನ್ನತ ಪದವಿಯನ್ನು ಪಡೆದಿದ್ದರು. ಮುಖ್ಯವಾಗಿ, ಆ ಹೊತ್ತಿಗಾಗಲೆ ಮದರಾಸು ಪ್ರಾಂತ್ಯದಲ್ಲಿ ಬಿರುಗಾಳಿಯಂತೆ ಎದ್ದಿದ್ದ ಬ್ರಾಹ್ಮಣ ವಿರೋಧಿ ಸಂಘಟನೆಯಾದ ಜಸ್ಟೀಸ್ ಪಾರ್ಟಿಯಲ್ಲಿ ಪ್ರಮುಖ ಪಾತ್ರ ವಹಿಸಿಯೂ ಬಂದಿದ್ದರು. ಈ ಎಲ್ಲದರ ಮುಂದುವರಿಕೆಯಾಗಿ, 1917ರಲ್ಲಿ ಮುಸ್ಲಿಮರನ್ನು ಸೇರಿಸಿಕೊಂಡು ಬ್ರಾಹ್ಮಣೇತರರೆಲ್ಲಾ ಪ್ರಜಾಮಿತ್ರ ಮಂಡಲಿ ಕಟ್ಟಿದರು. ಬ್ರಾಹ್ಮಣ-ಬ್ರಾಹ್ಮಣೇತರರ ತಿಕ್ಕಾಟ ಹೀಗೆ ಬೆಳೆಯುತ್ತಿರುವಾಗ, ಪ್ರತ್ಯಕ್ಷದೇವತೆಯಾದ ರಾಜ ಆಗ ತಾನೇ ಕಣ್ಣು ಬಿಟ್ಟು (1918ರಲ್ಲಿ) ಸರ್ ಲೆಸ್ಲಿ ಮಿಲ್ಲರ ಆಯೋಗ ರಚನೆ ಮಾಡಿ, ತನಿಖೆಗೆ ಆದೇಶ ನೀಡಿದ. ಈ ಸಂದರ್ಭದಲ್ಲಿಯೇ ಶ್ರೇಷ್ಠತೆಯ ಪ್ರತಿಪಾದಕ ವಿಶ್ವೇಶ್ವರಯ್ಯನವರು, ತಮ್ಮ ದಿವಾನಗಿರಿಗೆ ರಾಜೀನಾಮೆ ಕೊಟ್ಟಿದ್ದು.

ಡಿ.ವಿ.ಜಿ. ಯಾವ ಅರ್ಥದಲ್ಲಿ ಮುಗಿಯಿತು ಎಂದರೋ, ಎಲ್ಲ ಅರ್ಥದಲ್ಲಿಯೂ ಅದು ನಿಜವಾದ ಆರಂಭವೇ ಆಗಿತ್ತು. ಅದೇ ಮೈಸೂರಿನ ಅರಸು ವಂಶಕ್ಕೆ ಬಹು ದೂರದ ಸಂಬಂಧಿಯಾದ ದೇವರಾಜ ಅರಸು ಅವರು ಮುಖ್ಯಮಂತ್ರಿಯಾಗಿ ಬರುವವರೆಗೆ (1968ರಲ್ಲಿ) ದನಿ ಇಲ್ಲದ ಶೂದ್ರ—ದಲಿತ ವರ್ಗಗಳಿಗೆ ಉಸಿರಾಡಲು ಅವಕಾಶವಾಗಿರಲಿಲ್ಲ. ಹಾವನೂರ, ಆನಂತರ ವೆಂಕಟಸ್ವಾಮಿ, ಇದೀಗ ಚಿನ್ನಪ್ಪರೆಡ್ಡಿ ಆಯೋಗ—ವರದಿಗಳು ಇನ್ನೂ ಉಳಿದಿರುವ ವರ್ಣಭೇದದ ಲಾವಾರಸಗಳು ಎಂಬುದನ್ನು ಯಾರೂ ಮರೆಯುವಂತಿಲ್ಲ.

ಸದ್ಯದ ಬಂಡಾಯ ಸಂಘಟನೆಯೊಳಗೆ ಇನ್ನೂ ಹೊಗೆಯಾಡುತ್ತಿರುವ ವರ್ಣಭೇದದ ಈ ತರ-ತಮ ಭೇದಕ್ಕೆ ಬೀಜವಾಸನೆ ಕೇವಲ ಶೇಷಾದ್ರಿ ಅಯ್ಯರ ಅವರ ಕಾಲದಿಂದಲೇ ಅಲ್ಲದಿರಬಹುದು. ಜೈನರಾಗಿ ಮತಾಂತರಗೊಂಡ ಕವಿ ಪಂಪನ ಕಾಲದಲ್ಲೇ ರೂಪು ತಳೆದು, ಬಸವಣ್ಣನ ಕಾಲಕ್ಕೆ ಆಸ್ಫೋಟನೆ, ಮುಸ್ಲಿಂ ಹಾಗು ಬ್ರಿಟಿಷರ ಕಾಲದಲ್ಲಿ ಪುನರ್ಜನ್ಮ ಪಡೆದು, ನೆಲೆಗೊಳ್ಳುತ್ತಿದ್ದಿರಬೇಕು. ಬ್ರಿಟಿಷರೊಂದಿಗೆ ಆಧುನಿಕ ಕಾಲಕ್ಕೆ ಅಡಿಯಿಟ್ಟ ಕನ್ನಡದ ಶೂದ್ರ ಜನಾಂಗ, ಶಿಕ್ಷಣದ ಮೂಲಕ ತಮ್ಮ ಅಸ್ತಿತ್ವವನ್ನು ಸಾರಿದ್ದು ಬಂಡಾಯಕ್ಕೆ ಮೊಟ್ಟಮೊದಲ ದಾರಿಯಾಯಿತು. ಬರಗೂರು ರಾಮಚಂದ್ರಪ್ಪನವರು ಗುರುತಿಸಿದಂತೆ, ಬರೆಯುವುದೇ ಬಂಡಾಯ ಎಂಬುದು, ಚಾರಿತ್ರಿಕವಾಗಿ ಕೂಡ ಸತ್ಯವಾದ ಮಾತು. ರಾಜ್ಯ ಆಡಳಿತದಲ್ಲಿ ಉಂಟಾದ ಏಕಪಕ್ಷೀಯತೆ, ಅದರ ವಿರುದ್ಧ ಸಂಘಟಿತರಾದ ಪ್ರಯತ್ನವನ್ನು ಎರಡನೆಯ ಅದ್ವಿತೀಯ ಬಂಡಾಯ ಎಂದು ಕರೆದರೆ ತಪ್ಪಿಲ್ಲ ಎನ್ನಿಸುತ್ತಿದೆ.

ಇವಿಷ್ಟು ಹಳೆಯ ಮೈಸೂರಿನ ಕತೆಯಾದರೆ, ಈ ಸುಮಾರಿಗೆ ಉತ್ತರ ಕರ್ನಾಟಕದ ಕಡೆ—ಅದರಲ್ಲಿಯೂ ನಿಜಾಮ ಆಡಳಿತ, ಬ್ರಿಟಿಷರ ನೇರ ಆಡಳಿತಕ್ಕೆ

ಒಳಪಟ್ಟ ಮದರಾಸು ಹಾಗೂ ಬೊಂಬಾಯಿ ಪ್ರಾಂತ್ಯಗಳ-ಜನ, ಜೀವನ ಹೇಗಿತ್ತು ಎಂಬುದರ ಸ್ಪಷ್ಟ ವಿವರ ಇನ್ನಾದರೂ ದಾಖಲು ಗೊಳ್ಳುವ ಅವಶ್ಯಕತೆ ಇದೆ. ಆದರು, 8, ನವೆಂಬರ್ 1920ರಲ್ಲಿ ಗಾಂಧೀಜಿಯವರು ಉತ್ತರ ಕರ್ನಾಟಕದ ಪ್ರವಾಸ ಕೈಗೊಂಡಾಗ, ನಿಪ್ಪಾಣಿಯಲ್ಲಿ ಸೇರಿದ್ದ ದೊಡ್ಡ ಸಭೆಯಲ್ಲಿ ಒಬ್ಬರು ಎದ್ದು, ಬ್ರಾಹ್ಮಣ ರನ್ನು ಟೀಕಿಸಿದರಂತೆ. ಅಂತೆಯೇ 28 ಮೇ 1921ರಲ್ಲಿ ವಿಜಾಪುರದ ತಾಸ್‌ಬಾವಡಿ ಮೈದಾನದಲ್ಲಿ ಸುಮಾರು ಹನ್ನೆರಡು ಸಾವಿರ ಜನ ಸೇರಿದ್ದಾಗ ಶ್ರೀ ಶಾಬಾದಿ ಗುಂಡಪ್ಪನವರು ಬ್ರಾಹ್ಮಣರನ್ನು ಟೀಕಿಸಿದರಂತೆ. ಈ ಸಂದರ್ಭಗಳಲ್ಲಿ ಗಾಂಧೀಜಿ ಯವರು ಹಿಂದೂ ವಕೀಲರಂತೆ ಉತ್ತರಿಸಿದ್ದಾರೆ ನಿಜ. ಆದರೆ, ಗಾಂಧೀಜಿ ಪ್ರವಾಸ ಕೈಗೊಂಡ ಕಾಲಕ್ಕೆ ಹೀಗೆ ಸಭೆಗಳಲ್ಲಿ ಎದ್ದುನಿಂತು ಬ್ರಾಹ್ಮಣರನ್ನು ಟೀಕಿಸಲು ಅಲ್ಲಿನ-ಆಗಿನ ಪರಿಸರ ಒತ್ತಡ ಏನು ಎಂಬುದರ ಬಗ್ಗೆ ಬೆಳಕು ಚೆಲ್ಲಬೇಕಾದ ಅವಶ್ಯಕತೆ ಇದೆ.

ಈ ಹಿನ್ನೆಲೆಯಲ್ಲಿ ತಪ್ಪೋ ಸರಿಯೋ, ಒಂದು ನಿರ್ಣಯಕ್ಕೆ ಬರುತ್ತಿದ್ದೇನೆ. ಹಳೆಯ ಮೈಸೂರಿನ ಕಡೆ ಹೇಗೆ ಮೊದಲಿಗೆ ಒಕ್ಕಲಿಗ ಜನಾಂಗದವರು ಮೊದಲು ಬ್ರಾಹ್ಮಣರಿಗೆ ಪ್ರತಿಸ್ಪರ್ಧಿಗಳಾದರೊ, ಅಂತೆಯೇ ಉತ್ತರ ಕರ್ನಾಟಕದ ಕಡೆ ಲಿಂಗಾಯಿತ ಜನಾಂಗದವರು ಎಚ್ಚೆತ್ತುಕೊಂಡರು ಎನ್ನಿಸುತ್ತದೆ.

ಈ ಎಲ್ಲ ಸಂಗತಿಗಳನ್ನು ಗಮನಿಸಿದಾಗ, ಚೆನ್ನಿಗಪ್ಪ, ಶಾಬಾದಿ ಗುಂಡಪ್ಪ ಅಂಥವರು ಯಾವುದಾದರೂ ರಾಜಕೀಯ ಸಿದ್ಧಾಂತಗಳ ಪರಿಚಯ-ಪ್ರಭಾವಗಳಿಂದ ಪ್ರೇರೇಪಿತರಾಗಿದ್ದರು ಎನ್ನುವುದಕ್ಕಿಂತ, ಈ ನೆಲದ ಮತ್ತು ಒಡಲಿನ ಒತ್ತಡಗಳು ಅವರಲ್ಲಿ ಬಂಡಾಯ ಮನೋಧರ್ಮವನ್ನು ಮೂಡಿಸಿದ್ದವು ಎಂಬುದೇ ವಾಸ್ತವ. ಆದರೆ, ಸಿ. ಆರ್. ರೆಡ್ಡಿಯವರು, ಮೂಲತಃ ಅರ್ಥ ಶಾಸ್ತ್ರಜ್ಞರಾದವರು ಮಾರ್ಕ್ಸ್ ವಾದ ತಿಳಿದಿರಲಿಲ್ಲ ಎನ್ನುವುದಕ್ಕೆ ಸಾಧ್ಯವಿಲ್ಲ. ಆದರೆ ಅಂದಿನ ಪರಿಸರ—ಪರಿಸ್ಥಿತಿಗೆ ತಮ್ಮ ತಮ್ಮ ಜನಾಂಗದ ಶ್ರೇಯಸ್ಸು, ಸಂಘಟನೆ ಇತ್ಯಾದಿ ಮಾತ್ರವೇ ಅವಶ್ಯಕ, ಸೂಕ್ತ. ಸಾಕು ಎಂದುಕೊಂಡಿದ್ದರೊ ಏನೊ ? ಮುಂದೆ ಇದೇ ರೆಡ್ಡಿಯವರು ಆಂಧ್ರ ವಿಶ್ವವಿದ್ಯಾಲಯದ ಕುಲಪತಿಯಾದಾಗ, ಗ್ರಂಥಾಲಯದಿಂದ ಕಮ್ಯುನಿಸಂ ಪುಸ್ತಕ ಗಳನ್ನು ನಿಷೇಧಿಸಿದ್ದರು ಎನ್ನುವ ವಿ. ಆರ್. ನಾರ್ಲ ಅವರ ಮಾತುಗಳು ಮೇಲಿನ ನನ್ನ ಅಭಿಪ್ರಾಯಕ್ಕೇ ಒತ್ತುಕೊಡುವಂತಿದೆ.

ಈವರೆಗಿನ ಸಂಗತಿಗಳು ವಿವರಗಳಿಂದ, ಪ್ರಾರಂಭಕ್ಕೆ ಎತ್ತಿದ ಪ್ರಗತಿಶೀಲರ ಚಳುವಳಿ ಮತ್ತು ಬರಹಗಾರರನ್ನು ಹಿಂದೆ ಬಿಟ್ಟು ಬೇರೆ ದಿಕ್ಕು ಹಿಡಿದಂತೆ ಭಾಸವಾಗಿರ ಬಹುದು. ಆದರೆ, ತಮ್ಮ ಮತ್ತು ಜನಾಂಗದವರ ಏಳಿಗೆಗೆ ಬಂಡೆದ್ದವರು ಸುತ್ತಲೂ ಇರುವಾಗ, 1943ರಲ್ಲಿ ಸಂಘಟಿತರಾಗಿ ಹೊರಟ ಪ್ರಗತಿಶೀಲರು, ಮಾರ್ಕ್ಸ್-ಲೆನಿನ್

ಅವರಿಂದ ಪ್ರೇರಣೆ ಪಡೆದು, ಸಮಾಜ ಬದಲಾವಣೆಗೆ ಹೊರಟಿದ್ದು ಸಮರ್ಥ
ನೀಯವೆ ? ಅಥವಾ ಅವರ ವಾದ-ವಿವಾದಗಳೆಲ್ಲ ಬರವಣಿಗೆ, ಭಾಷಣಗಳ ಹಂತಕ್ಕೆ
ಸೀಮಿತವಾಗಿತ್ತೇ ?

> "ಸೈದ್ಧಾಂತಿಕವಾಗಿ ಮಾರ್ಕ್ಸ್‌ವಾದವನ್ನು ಅಭ್ಯಾಸ ಮಾಡಿದವರು,
> ಫ್ಯಾಶನ್ನಿಗಾಗಿ ಎಡಪಂಥದವರೆಂದು ಕರೆದುಕೊಂಡವರು,
> ಆಗ ಪ್ರಚಲಿತವಾಗಿದ್ದ ರಷ್ಯನರ ಮೇಲಿನ ಮೆಚ್ಚುಗೆಯಿಂದ
> ಭಾವುಕ ಸಮಾಜವಾದಿಗಳಾದವರು, ಕುತೂಹಲಕ್ಕಾಗಿ, ಆ
> ಗಳಿಗೆಯ ಪ್ರಚಾರಕ್ಕಾಗಿ ಕಮ್ಯುನಿಸ್ಟರು-ಪ್ರಗತಿಶೀಲರು
> ಎನಿಸಿಕೊಂಡವರೆಲ್ಲ ಇದರಲ್ಲಿದ್ದರು."

ಎಂದು ತಮಾಷೆ ಮಾಡುವ ಎಸ್. ಅನಂತನಾರಾಯಣ ಅವರ ಮಾತುಗಳು ವೈಯ
ಕ್ತಿಕ ಮಟ್ಟದಲ್ಲಿ ನಿಜವೇ ಇರಬಹುದು. ಆದರೆ, ವರ್ಗ ಹೋರಾಟದ ನೆಲೆಯನ್ನು
ಬರವಣಿಗೆಯಲ್ಲಿ ತರುವ ಪ್ರಯತ್ನ, ಆ ಮೂಲಕ ಓದುಗ ವರ್ಗದಲ್ಲಿ ನವೋದಯ
ದವರನ್ನು ಪ್ರಭಾವಿಸಿದ್ದು, ಬಸವರಾಜ ಕಟ್ಟೀಮನಿ, ನಿರಂಜನ, ಚದುರಂಗ ಅಂಥ
ವರು ಹೋರಾಟದ ನಡುವೆಯೇ ಬೆಳೆದು ನಿಂತಿದ್ದು—ಪ್ರಗತಿಶೀಲ ಚಳುವಳಿಯ
ಪರಿಣಾಮ ಎಂಬುದನ್ನು ಗಣನೆಗೆ ತೆಗೆದುಕೊಳ್ಳುವುದು ಸಮಂಜಸ. ಅಷ್ಟೇ ಅಲ್ಲ,
ಒಂದು ಚಳುವಳಿ ಮುಂದಿನ ಚಳುವಳಿಗಳಿಗೆ ಮುನ್‌ಸೂಚನೆಯಾಗಿ, ಒಂದು 'ಪಾಠ
ವಾಗಿ ಕೂಡ ಬಂದದ್ದು ಎಂಬುದನ್ನು ಉಪೇಕ್ಷಿಸಬಾರದು. ಇವತ್ತಿನ ಬಂಡಾಯ
ಸಂಘಟನೆಯ ಕಚ್ಚಾ ಉದ್ದೇಶಗಳು, ಪ್ರಗತಿಶೀಲರ ಪ್ರಯತ್ನ ಹಾಗು ಸೋಲಿನ
ಬೇಲಿಯ ಮೇಲೆ ಅರಳಿವೆ ಎಂಬುದನ್ನು ಇಲ್ಲಿ ಮರೆಯುದಿರುವುದಕ್ಕೆ ಸಾಧ್ಯವಿಲ್ಲ.

ಈ ಸಂದರ್ಭದಲ್ಲಿಯೇ ರಷ್ಯಾ ಕುರಿತು, ಸಾಮ್ಯವಾದ ಕುರಿತು, ಹಾಗು ನಾಡು
ದೇಶ, ಅಂತರ ರಾಷ್ಟ್ರೀಯ ವ್ಯಕ್ತಿ–ವಿಚಾರಗಳನ್ನು ಕುರಿತು, ಕನ್ನಡಿಗರಲ್ಲಿ ವೈಚಾರಿಕ
ಜಾಗೃತಿ ಬೆಳೆಸಲು "ಮಿಂಚಿನ ಬಳ್ಳಿ" ಹುಟ್ಟು ಹಾಕಿದ (1937ರಲ್ಲಿಯೇ) ಏಕಾಂಗ
ವೀರ ಬುರ್ಲಿ ಬಿಂದು ಮಾಧವರ ಪ್ರಯತ್ನ ಕೂಡ ಉಲ್ಲೇಖನೀಯ.

ಈ ಪ್ರಯತ್ನಗಳು ಲೋಹಿಯಾ ಸಮಾಜವಾದವನ್ನು ತಮ್ಮ ಬಳಿ ಬಿಟ್ಟು
ಕೊಳ್ಳಲಿಕ್ಕೆ ನೆರವಾದವು ಎಂಬುದೇ ಈವರೆಗಿನ ವಿವರದ ಉದ್ದೇಶವಾಗಿದೆ. ಭಾರತದ
ಪರಿಸ್ಥಿತಿಗೆ ಅಂದರೆ, ಬಹು ಸಂಖ್ಯೆಯ ಜನತೆಗೆ, ಅದರಲ್ಲೂ ಜಾತಿಯ ಹೆಸರಿನಲ್ಲಿ
ಛಿದ್ರ ಛಿದ್ರವಾಗಿ ತಮ್ಮ ಸಾಮಾಜಿಕ ಅಸ್ತಿತ್ವವನ್ನೇ ಕಳಕೊಂಡ ಜನತೆಗೆ, ಅಲ್ಪ
ಪ್ರಮಾಣದ ಕೈಗಾರಿಕಾ ಉದ್ಯಮಗಳಿಂದ ನಿರುದ್ಯೋಗ ತೊಡೆದು ಹಾಕಲಿಕ್ಕೆ, ಕೇವಲ
ವರ್ಗ ಹೋರಾಟ ಅದರಲ್ಲೂ ಹಿಂಸಾಕ್ರಾಂತಿಯಿಂದ ಕೂಡಿದ-ಕೊನೆಗೆ ಸರ್ವಾಧಿಕಾರಿ
ಸ್ಥಾನಕ್ಕೆ ಏರುವ ಮಾರ್ಕ್ಸ್‌ವಾದ ಸಲ್ಲದು ಎಂಬ ವಿಚಾರಗಳ ಹಿನ್ನೆಲೆಯಲ್ಲಿ ಮುಂದೆ
ಬಂದವರು ಲೋಹಿಯಾ ಹಾಗು ಅವರ ಸಮಾಜವಾದ. ಹಿಂದಿ ಮತ್ತು ಪ್ರಾದೇಶಿಕ

ಾಷೆಯು ಬಳಕೆ, ರಾಜಕೀಯ ವಿಕೇಂದ್ರೀಕರಣ, ರೈತರ ಸಂಘಟನೆ, ಬ್ರಾಹ್ಮಣೇತರರ ಶಕ್ತಿ, ಬಯಸಿದ ಈ ಲೋಹಿಯಾ—ಸಮಾಜ ವಾದವನ್ನು, ಕರ್ನಾಟಕಕ್ಕೆ ತಂದವು ಯಾರೇ ಇರಲಿ, ಶಾಂತವೇರಿ ಗೋಪಾಲಗೌಡರಂತೂ ಆ ಮೂಲಕ ರಾಜಕೀಯ ಹೋರಾಟ ಕೈಗೆ ಎತ್ತಿಕೊಂಡದ್ದು ನಿಜ. ಅನಂತಮೂರ್ತಿ, ಲಂಕೇಶ್, ಪೂರ್ಣಚಂದ್ರ ತೇಜಸ್ವಿ, ಪ್ರೊ|| ಎಂ. ಡಿ. ನಂಜುಂಡಸ್ವಾಮಿ, ಚಂದ್ರಶೇಖರಪಾಟೀಲ ಅವರಂತಹ ಆಗಿನ ತರುಣರು—ಎಡಪಂಥೀಯ ರಾಜಕೀಯ ಒಲವಾಗಲಿ ; ಸರ್ವೋದಯ, ಪ್ರಗತಿಶೀಲ ಚಳುವಳಿಗಳ ಬಗ್ಗೆ ಮೆಚ್ಚುಗೆಯಾಗಲಿ ಇಲ್ಲದ ಕವಿ ಗೋಪಾಲಕೃಷ್ಣ ಅಡಿಗರ ಹಿಂಬಾಲಕರಾಗಿ (ನಂಜುಂಡಸ್ವಾಮಿ ಬಿಟ್ಟು) ಒಂದು ಕಡೆ, ಇನ್ನೊಂದು ಕಡೆಗೆ ಗೋಪಾಲಗೌಡರ ಸಹವರ್ತಿಗಳಾಗಿ ಲೋಹಿಯಾ ವಾದಕ್ಕೆ ಒಲಿದಿದ್ದು—ಇವತ್ತಿಗೂ ಬಿಡಿಸಲಾರದ ಸಮಸ್ಯೆಯಾಗಿದೆ. ನೇರ ರಾಜಕೀಯ ಪಕ್ಷವಾಗಿ ಲೋಹಿಯಾ ವಾದವನ್ನು ಕೈಗೆ ಎತ್ತಿಕೊಂಡ ಗೋಪಾಲಗೌಡರ ಇನ್ನೊಂದು ಶಿಷ್ಯವರ್ಗದವರಾದ ಜೆ. ಎಚ್. ಪಟೇಲ್, ನಜೀರ್‌ಸಾಬ್, ಕಾಗೋಡು ತಿಮ್ಮಪ್ಪ, ಎಸ್. ಬಂಗಾರಪ್ಪ, ಕೋಣಂದೂರು ಲಿಂಗಪ್ಪ ಅಂಥವರ ಸಾಧನೆ—ರಾಜಕಾರಣಗಳು ಮಾತ್ರ ಎಂಬ ಹಣೆಪಟ್ಟಿಗಿಂತ ಭಿನ್ನವಲ್ಲವಷ್ಟೆ!

ಕುವೆಂಪು ಅವರು ಆ ಕಾಲಕ್ಕೇ ಶೂದ್ರ ಜನಾಂಗದ ನಡುವೆ, ಆಧುನಿಕ ಶಿಕ್ಷಣ ಪಡೆದು, ತನ್ನ ಜನಾಂಗದ ಎರಡೂ ಕಣ್ ತೆರೆಸಲು ಎದ್ದುಬಂದು ; ಆದರೆ ಮೈಸೂರು ಅರಸರ ಪಟ್ಟಣದಲ್ಲಿ ನೆಲೆನಿಂತು, ಸುತ್ತಲೂ ಆವರಿಸಿದ್ದ ಬ್ರಾಹ್ಮಣರ ನಡುವೆ ಸಿಲುಕಿಕೊಂಡು-ಒಂದು ಬದಿಗೆ ಕಾದಂಬರಿ ಇನ್ನೊಂದು ಬದಿಗೆ ರಾಮಾಯಣ, ಒಂದು ಬದಿಗೆ ಸುಧಾರಣೆ, ಇನ್ನೊಂದು ಬದಿಗೆ ಗಾಂಧಿ ಹಿಂದೂವಾದ, ಒಂದು ಬದಿಗೆ ವೈಚಾರಿಕತೆ ಇನ್ನೊಂದು ಬದಿಗೆ ಅಧ್ಯಾತ್ಮವನ್ನು ಮೇಳವಿಸಿ ಉಳಿದಿದ್ದೇ ಪವಾಡ ಸದೃಶವಾದದ್ದು. ಅಂತೆ, ನಮ್ಮದ ಬ್ರಾಹ್ಮಣೇತರರಿಗೆ ದಾರಿ ದುಸ್ತರವೇನೂ ಆಗಿರಲಿಲ್ಲವಷ್ಟೆ. ಆದರೆ ಸಂಘಟನೆ, ಚಳುವಳಿಗೆ ದೂರವಾದ ಕುವೆಂಪು ಅವರ ದೋಷವೆಂಬ ಗುಣ, ಅಡಿಗರ ಪಾಲಿಗೆ ವರವಾಯಿತೆ ? ಇಂತಹ ಪರಿಸ್ಥಿತಿಯಲ್ಲಿ ಗಟ್ಟಿಯಾಗಿ, ಲೋಹಿಯಾವಾದಿಯಾಗಿಯೇ ನಿಂತವರು ಪ್ರೊ|| ಎಂ. ಡಿ. ನಂಜುಂಡಸ್ವಾಮಿ ಒಬ್ಬರೆ. ಗೋಪಾಲಗೌಡರ ನಂತರದ ಕೇಂದ್ರ ಬಿಂದುವಾದ ಸ್ವಾಮಿಯವರು, ನಂತರದ ಬ್ರಾಹ್ಮಣೇತರ ಚಳುವಳಿ, ರೈತ ಚಳುವಳಿಗಳಲ್ಲಿ ಮಹತ್ವದ ಪಾತ್ರ ವಹಿಸುತ್ತ ಬಂದರು.

ಈ ಸಮಾಜವಾದಿಗಳ ಕಾರ್ಯಗುಣವನ್ನು ದಾಖಲಿಸಿಕೊಳ್ಳುವ ಮುಂಚೆ, ಇದೇ ಎಳೆಗೆ ಸೇರಿಸಿಕೊಳ್ಳಬಹುದಾದ ಇನ್ನೊಂದು ಪ್ರವಾಹ—ಪಡೆ: ಉತ್ತರ ಕರ್ನಾಟಕದ ದಿನಕರ ದೇಸಾಯಿ, ಗೌರೀಶ ಕಾಯ್ಕಿಣಿ, ಶಾಂತಿನಾಥ ದೇಸಾಯಿ,

ವ್ಯಾಸರಾಯ ಬಲ್ಲಾಳ, ಗಂಗಾಧರ ಚಿತ್ತಾಲ, ಯಶವಂತ ಚಿತ್ತಾಲ ಅಂಥವರು ಪ್ರಾರಂಭಕ್ಕೆ ಎಂ. ಎನ್. ರಾಯ್ ಅವರ ಬದುಕು—ವಿಚಾರಗಳಿಂದ ಪ್ರಭಾವಿತ ರಾದದ್ದು, ಇವತ್ತಿಗೂ ಎಸ್. ಆರ್. ಬೊಮ್ಮಾಯಿಂದ ಅಂತಹ ಹಿರಿಯ ರಾಜಕಾರಣಿ ರಾಯಿಸ್ಟರೆಂದು ಕರೆದುಕೊಳ್ಳುವುದು-ಕೇವಲ ಶಿಕ್ಷಣಕ್ಕಾಗಿ ಬೊಂಬಾಯಿಯತ್ತ ಮುಖ ಮಾಡಿದ್ದರೆಂದಾಗಲಿ, ರಾಯ್ ಅವರ ಬೌದ್ಧಿಕ ಎತ್ತರ ಪ್ರಭಾವಿತಗೊಳಿಸಿ ತ್ತೆಂದಾಗಲಿ ಸರಳೀಕರಿಸಲು ನಾನು ಇಚ್ಛಿಸುವುದಿಲ್ಲ. ದಕ್ಷಿಣ ಕನ್ನಡ, ಉತ್ತರ ಕನ್ನಡ ಗಳಲ್ಲಿನ ಜನ ಜೀವನದ ಚಾರಿತ್ರಿಕ ವಿಶ್ಲೇಷಣೆ ಈ ದಿಕ್ಕಿನಲ್ಲಿ ಆಗಬೇಕಾಗಿದೆ.

ಹೀಗಿರುವಾಗ 1973ರಲ್ಲಿ ಸಮಾಜವಾದೀ ಯುವಜನ ಸಭಾ ಗುಂಪಿನವರು, ಪೂರ್ಣಚಂದ್ರ ತೇಜಸ್ವಿಯವರ ಹೆಸರಿನಲ್ಲಿ ಒಂದು ಕೆಂಪು ಕಾಗದದ ಕರಪತ್ರ ಹೊರಡಿಸಿ, ಭಾರತದ ಸಮಾಜವಾದಿಗಳಿಗೆ, ಅದರಲ್ಲೂ ನೇರವಾಗಿ ಸಮಾಜವಾದಿ ಪಕ್ಷದ ಬ್ರಾಹ್ಮಣ ವರ್ಗದವರಿಗೆ ಎಚ್ಚರಿಕೆ ಜೊತೆಗೆ ಬುದ್ಧಿವಾದವನ್ನು ಕೊಡಬಯಸಿ ದರು. ಆ ಮಾತುಗಳೇ ಸಮಾಜವಾದದ ಅಂದಿನ ಎಲ್ಲ ಅವಸ್ಥೆಯನ್ನು ತೆರೆದು ತೋರುತ್ತವೆ :

"ಲೋಹಿಯಾ ನಿಧನಾ ನಂತರ ಸಮಾಜವಾದಿ ಆಂದೋಳನ ಭಾರತದ ಪುಢಾರಿ ರಾಜಕಾರಣದ ಒಂದು ಅವಿಭಾಜ್ಯ ಅಂಗದಂತೆ ವರ್ತಿಸಿದೆಯೇ ಹೊರತು ಕ್ರಾಂತಿಕಾರಿ ರಾಜಕೀಯ ಪಕ್ಷದಂತೆ ಅಲ್ಲ. ಮೈಸೂರಿನ ರಾಜಕಾರಣ ಈ ಅಸಂಬದ್ಧ ಘಟನಾವಳಿಗಳ ಸಚಿತ್ರ ದರ್ಪಣವಾಗಿದೆ. ಕಾಂಗ್ರೆಸ್ ಇಬ್ಭಾಗವಾದೊಡನೆ ಈ ಪಕ್ಷದ ಅಧ್ಯಕ್ಷರೇ ಲೀಲಾಜಾಲವಾಗಿ ಪಕ್ಷಾಂತರ ಮಾಡಿ ಸಚಿವರಾದರು. ಚುನಾಯಿತರಾಗುತ್ತಿದ್ದಂತೆಯೇ ಪಕ್ಷದ ಶಾಸಕರೊಬ್ಬರು ಪಕ್ಷ ತ್ಯಾಗ ಮಾಡಿ ಬೇರಾದರು. ರಾಜ್ಯ ಸಮ್ಮೇಳನವನ್ನು ಅನಿರ್ದಿಷ್ಟ ಅವಧಿಯವರೆಗೆ ನಿಷ್ಕಾರವಾಗಿ ಮುಂದೂಡಲಾಯ್ತು. ಸಮಾಜವಾದಿ ಯುವಜನ ಸಭಾದ ಕಾರ್ಯಕಲಾಪಗಳಲ್ಲಿ, ಧ್ಯೇಯ ಧೋರಣೆಗಳಲ್ಲಿ ಹಾಗೂ ರಾಜ್ಯ ಸಮ್ಮೇಳನ ಸಮಾವೇಶಗಳಲ್ಲಿ ಪಕ್ಷದ ನಾಯಕರು ಅನಗತ್ಯ ಹಸ್ತಕ್ಷೇಪ ಮಾಡಿ ಗುಂಪುಗುಳಿತನವನ್ನು ಪ್ರಚೋ, ದಿಸುತ್ತಿದ್ದಾರೆ. ಈ ನಡುವೆ ತಾತ್ಕಾಲಿಕ ನಾಮಕರಣಗೊಂಡ ಅಧ್ಯಕ್ಷರೂ ಕಾರ್ಯದರ್ಶಿಗಳೂ ಹಾಗೂ ರಾಜ್ಯ ಸಮಿತಿ ಸದಸ್ಯರೂ, ಅನೇಕ ಅತ್ಯಂತ ಮುಖ್ಯ ವಿಚಾರಗಳನ್ನು ಕಾರ್ಯಕರ್ತರ, ಸದಸ್ಯರ ಹಾಗೂ ಸಹೋದ್ಯೋಗಿಗಳ ಸಮಾಲೋಚನೆ–ಅನುಮತಿಗಳನ್ನು ಪಡೆಯದೆ ಕೈಗೊಂಡಿ ದ್ದಾರೆ. ಮೈತ್ರಿಕೂಟ, ಕಮ್ಯುನಿಸ್ಟ್ ಮಾರ್ಕ್ಸಿಸ್ಟರೊಡನೆ ಸಹಕರಿಸುವ ಸಹಯೋಗ ಇವು ಮುಂತಾದವು ಕೆಲವನ್ನು ಇಲ್ಲಿ ನಾವು ಹೆಸರಿಸಬಹುದು.

ಅದೇ ಕರಪತ್ರದಲ್ಲಿಯೇ ಮುಂದುವರೆದು :

"ನಮ್ಮಲ್ಲಿ ಕಮ್ಯುನಿಸ್ಟರೊಡನೆ ನಿಕಟ - ಸ್ನೇಹಕ್ಕೆ ಹಾತೊರೆಯುತ್ತಿರುವವರಲ್ಲಿ ಬಹುಪಾಲು ಬ್ರಾಹ್ಮಣರಿದ್ದಾರೆ. (ಇವರಲ್ಲಿ ವೆಂಕಟರಾಮ್ ಮುಖ್ಯರು. ವೈಯಕ್ತಿಕವಾಗಿ ಸಮಾಜವಾದಿ ಪಕ್ಷ ಕೊನೆಗೆ ಮಾರ್ಕ್ಸವಾದಿ ಪಕ್ಷದಲ್ಲೇ ವಿಲೀನವಾಗಬೇಕಾದುದು ತರ್ಕಪೂರ್ಣ ಇತ್ಯರ್ಥ ಎಂದೆನ್ನುತ್ತಾರೆ ಇವರು. ಮೈಸೂರು ನಗರದಲ್ಲಿ ಲೋಹಿಯಾರವರ ಪ್ರತಿಪಾದಕರೆಂದು ಹೇಳಿಕೊಳ್ಳುವ ಅನಂತ ಮೂರ್ತಿ ಈಚೆಗೆ ಮಾರ್ಕ್ಸವಾದಿ ಪಕ್ಷದ ಬಗೆಗೆ ತೋರಿಸುತ್ತಿರುವ ಒಲವು ಮತ್ತು ಮಾರ್ಕ್ಸವಾದಿ ವಿದ್ಯಾರ್ಥಿ ಫೆಡರೇಷನ್‌ಗೆ ಅವರು ಸೂಚಿಸುತ್ತಿರುವ ಬೆಂಬಲ ಬಹಳ ಆತಂಕಕಾರಿಯಾದುದು.)

ಹೀಗೆ, ಲೋಹಿಯಾ ಸಮಾಜವಾದಿಗಳಿಗೆ ಹುಟ್ಟಿನಿಂದಲೂ ಇದ್ದ ಕಮ್ಯುನಿಸ್ಟರ ಬಗೆಗಿನ ದ್ವೇಷದ ಜೊತೆಗೆ, ಬ್ರಾಹ್ಮಣರ ಬಗೆಗಿನ ಅಪಾಯದ ಅರಿವೂ ಸೇರಿ ಕೊಂಡದ್ದು, ಕೇವಲ ಕರ್ನಾಟಕದ ಸಂದರ್ಭದಲ್ಲಿ ಮಾತ್ರವೇ ಎಂದರೂ, ಈ ನೆಲಕ್ಕೆ ಹೊಸದೇನಲ್ಲ ಎಂಬುದನ್ನು ಪ್ರಾರಂಭದಿಂದಲೂ ನೋಡುತ್ತಾ ಬಂದಿದ್ದೇವೆ. ಈ ನಡುವೆ ದೇಶದಲ್ಲಿಯೇ ಲೋಹಿಯಾವಾದ ಹಾಗೂ ಸಮಾಜವಾದಗಳು ಜೆ. ಪಿ. ಕಾಲ ದಲ್ಲಿ ಜನತಾ ಪಕ್ಷದೊಳಗೆ ಸೇರಿಕೊಂಡರೂ, ಇವತ್ತಿಗು ತಮ್ಮ ಮೂಲಸ್ಥಾನಗಳನ್ನು ಆಗಾಗ್ಗೆ ನೆನಪಿಸಿಕೊಳ್ಳುವುದು, ಸ್ಥಾಪಿಸಿಕೊಳ್ಳುವುದಂ ತಪ್ಪಿದ್ದಿಲ್ಲ.

ಲೋಹಿಯಾ ಸಮಾಜವಾದಿಗಳಾಗಿ ಬರಹಗಾರರಾದ, ನನ್ನ ತಲೆಮಾರಿನವರಿಗೆ ಹಿರಿಯರಾದ ಅನಂತಮೂರ್ತಿ, ಲಂಕೇಶ್, ಪೂರ್ಣಚಂದ್ರ ತೇಜಸ್ವಿ, ಇವರ ಪ್ರತಿಭೆ ಕೊಡುಗೆಗಳನ್ನು ಗೌರವದಿಂದಲೇ ಕಾಣುತ್ತಾ ಕೇಳಬಯಸುವ ಪ್ರಶ್ನೆ : ಒಂದು ತತ್ವ, ಚಳುವಳಿಗೆ ಬದ್ಧರಾಗಿರುವಾಗಲೇ ಜನ—ದೂರವಾದ ಕೃತಿ ಕೇಂದ್ರಿತವಾದ ಬರವಣಿಗೆ ನಡೆಸಿದ್ದು ಸೂಕ್ತವೆ ?

ಇಂತಹ ಪ್ರತಿಭಾವಂತರು, ವಿಚಾರವಂತರು, ಜನಪರ ಕಾಳಜಿ ಇದೆ ಎಂದು ಕೊಂಡವರು ಇದ್ದೂ, ತಾವು ಬಂದ ಪ್ರದೇಶದಲ್ಲಿ (ಹೆಚ್ಚು ಜನ ಅಲ್ಲಿಂದಲೇ ಬಂದವ ರೆಂದು ಮುನ್ನುಡಿಗಳಲ್ಲಿ ಬೆನ್ನು ಚಪ್ಪರಿಸಿಕೊಂಡದ್ದು ಗಮನಿಸಿಯೇ) ನಡೆದ ಹೋರಾಟದಲ್ಲಿ ಯಾವ ಪಾತ್ರವನ್ನು ವಹಿಸದಿದ್ದಾಗ, ಕಾರಣಗಳನ್ನು ಅನ್ಯಕಡೆ ಹುಡುಕಾಡಬೇಕಾಗುತ್ತದೆ. ಅಲ್ಲದೆ, ಜಿ. ರಾಜಶೇಖರ ಅಂಥ ಚಿಂತಕರ ವಿಶ್ಲೇಷಣೆ ಚರಿತ್ರೆಯಲ್ಲಿ ದಾಖಲಿಗಿಬಿಡುವುದಾಗುತ್ತದೆ :

''ಶಿವಮೊಗ್ಗ ಜಿಲ್ಲೆಯಲ್ಲಿ ಮಾತ್ರವಲ್ಲ, ಕರ್ನಾಟಕದಲ್ಲಿ ಎಲ್ಲಿಯೂ ವಾಮಪಂಥೀಯರಿಗೆ ಪ್ರಬಲವಾದ ಗ್ರಾಮೀಣ ಸಂಘಟನೆಗಳಿಲ್ಲ. ಸೋಷಿಯಲಿಸ್ಟರು ಪಕ್ಷವಾಗಿ ಮಾತ್ರವಲ್ಲ, ಒಂದು ಲಾಬ್ಬಿಯಾಗಿ ಕೂಡ ನಾಶವಾಗಿರುವ ಮತ್ತು ಕಮ್ಯುನಿಸ್ಟರು ತೀರ ದುರ್ಬಲವಾಗಿರುವ ಪ್ರಸ್ತುತ ರಾಜಕೀಯ ಸನ್ನಿವೇಶದಲ್ಲಿ, ಅಂದರೆ 80-82ರ ಅವಧಿಯಲ್ಲಿ ರಾಜ್ಯದಲ್ಲಿ ಘಟಪ್ರಭ-ಮಲಪ್ರಭ ಪ್ರದೇಶದ ರೈತರ ಬಂಡಾಯ, ನಿಪ್ಪಾಣಿ ಹೊಗೆಸೊಪ್ಪು ಬೆಳೆಗಾರರ ಚಳುವಳಿ ಮತ್ತು ಶಿವಮೊಗ್ಗ ರೈತರ ಚಳುವಳಿಗಳು ನಡೆದಿವೆ. ಕರ್ನಾಟಕದಲ್ಲಿ ಹಿಂದೆ ನಡೆದ ಯಾವುದೇ ರೈತ ಹೋರಾಟಕ್ಕಿಂತಲೂ ದೊಡ್ಡ ಪ್ರಮಾಣದಲ್ಲಿ ನಡೆದ ಈ ರೈತ ಚಳುವಳಿಗಳ 'ಶುದ್ಧ ರಾಜಕೀಯೇತರ' ಗುಣವನ್ನು, ಇವು ಗಳ, ಸಂಘಟನೆಗಳು ಒತ್ತಿ ಹೇಳುತ್ತವೆ.''

ಈಗಾಗಲೇ ಹೇಳಿದಂತೆ ಈ ಸಂದರ್ಭದಲ್ಲಿ 'ಸಮಾಜವಾದಿ, ಬರಹಗಾರರ ನಿಷ್ಕ್ರಿಯತೆ ಎದ್ದು ಕಾಣುತ್ತದೆಯಷ್ಟೇ.'

ಇಷ್ಟಾಗಿ, ಬಂಡಾಯ ಸಂಘಟನೆಯ ದೃಷ್ಟಿಯಿಂದ, ಲೋಹಿಯಾವಾದಿಗಳು 1973ರಲ್ಲಿ ನಡೆಸಿದ ಜಾತಿವಿನಾಶ ಸಮ್ಮೇಳನ, ಏಪ್ರಿಲ್ 20, 21-1974ರಲ್ಲಿ ಬರಹಗಾರರ ಮತ್ತು ಕಲಾವಿದರ ಒಕ್ಕೂಟಗಳು ಮಹತ್ವದ ಸಂಗತಿಯಾಗಿವೆ.

ಚಂದ್ರಶೇಖರ ಪಾಟೀಲರು ನಿರೂಪಿಸಿರುವಂತೆ : "ಸಾವಿರಾರು ವರ್ಷಗಳಿಂದ ಬೌದ್ಧಿಕ ದಬ್ಬಾಳಿಕೆ ನಡೆಸಿ, ಜನತೆಗೆ ತಿಳಿಯದ ಭಾಷೆಯ ಮೂಲಕ, ಆಡಳಿತ ಸೂತ್ರಗಳ ಮೂಲಕ ನಮ್ಮ ಜನರನ್ನು ಮೂಕರನ್ನಾಗಿಸಿದ ಉಚ್ಚವರ್ಗದ ಹತೋಟಿಯಿಂದ ರೇಡಿಯೋ, ವೃತ್ತಪತ್ರಿಕೆ, ಚಲನಚಿತ್ರ, ಪುಸ್ತಕ ಪ್ರಕಾಶನ ಮುಂತಾದ ಸಮಷ್ಟಿ ಮಾಧ್ಯಮಗಳನ್ನು ಬಿಡುಗಡೆ ಮಾಡಲು ಹೋರಾಡುವ ಕಾಲ ಈಗ ಬಂದಿದೆ. ಈ ಎಲ್ಲ ರಂಗಗಳಲ್ಲಿ ಗಟ್ಟಿಗೊಂಡ ಪಟ್ಟಭದ್ರ ಹಿತಾಸಕ್ತಿಗಳ 'ವ್ಯವಸ್ಥೆ' (ಎಸ್ಟಾಬ್ಲಿಷ್ ಮೆಂಟ್)ಯನ್ನು ಬದಲಾಯಿಸುವುದು, ಬದಲಾಯಿಸಲು ಹೋರಾಡುವುದು ಒಕ್ಕೂಟದ ಉದ್ದೇಶಗಳಲ್ಲೊಂದಾಗಿದೆ. ಪ್ರತಿಭಟನೆ, ಅಸಹಕಾರ, ಕಾನೂನುಭಂಗ, ಸತ್ಯಾಗ್ರಹ ಇವು ನಾವು ಅನುಸರಿಸಲಿರುವ ಕ್ರಮಗಳು."

ಅವರೇ ಮುಂದುವರಿದು :

"ನಾವು ಬ್ರಾಹ್ಮಣನಿಗೆ ಅಥವಾ ವೈದಿಕನಿಗೆ ಈ ಎಲ್ಲ ರಂಗಗಳಲ್ಲಿ ಪ್ರತಿಸ್ಪರ್ಧಿಗಳಾಗ ಬಯಸುವುದಿಲ್ಲ. ಅವನಿಗೆ ಸಿಗುತ್ತಿರುವ ಸವಲತ್ತುಗಳನ್ನು ನಾವು ಕಸಿದುಕೊಳ್ಳುವುದಿಲ್ಲ. ನಮ್ಮದಿಷ್ಟೇ : ಈ ನಾಡಿನಲ್ಲಿ ಬಹುಸಂಖ್ಯಾಂತರಾದ ಶೂದ್ರರನ್ನೂ, ಹರಿಜನರನ್ನೂ ಹಿಂದುಳಿದವರನ್ನೂ ಸಂಘಟಿಸುವುದು, ನಮಗೆ ನ್ಯಾಯವಾಗಿ ಏನು ಸಲ್ಲಬೇಕೋ ಅದಕ್ಕೆ ಹೋರಾಡುವುದು ಅವುಗಳನ್ನು ಪಡೆಯುವುದು."

ಈ ಮಾತುಗಳು ಮೇಲುನೋಟಕ್ಕೆ ಸಮಾಜವಾದಿಗಳನ್ನು ಅಂಬೇಡ್ಕರರವಾದದ ಸಮೀಪಕ್ಕೆ ತಂದಿತು ಎನ್ನುವಂತೆ ಕಂಡರು ಕೂಡ, ಆ ಹಿರಿಯರು ಮಾಡಿದ್ದಾದರೂ ಏನು ? ಚಂದ್ರಶೇಖರ ಪಾಟೀಲರೇ ಕೆಲ ಹಿಂದಿನ "ಸಂಕ್ರಮಣ"ದ ತಮ್ಮ ಕಾಲಂನಲ್ಲಿ ವಿಶ್ಲೇಷಿಸಿದಂತೆ ಮೂರು ಜನರು ಮೂರು ಬಗೆಯ ಸಂತರಂತೆ ಕಾಣಿಸಿಕೊಂಡದ್ದು. ಅಲ್ಲದೆ ಇತ್ತೀಚೆಗೆ, ಜನಕ್ಕೆ, ಸಂಘಟನೆಗೆ, ಕೊನೆಗೆ ಅಲ್ಬರ್ಟ್ ಕಾಮುವಿನ ಸಿಫಸ್‌ನಂತೆ ಭವಿಷ್ಯಕ್ಕು ಶೋಕ ಹಾಡಿ-ಜಾಗೃತ ಸಾಹಿತ್ಯ ಸಮಾವೇಶದಲ್ಲಿ ವೇಷಧಾರಿಗಳಾದ ಇವರ ನಿಲುವು ಪುನರಾವಲೋಕನ ಬಯಸುವುದಾಗಿದೆ.

ಈ ಹಿಂದೆ ತುರ್ತು ಪರಿಸ್ಥಿತಿಗಿಂತ ಸ್ವಲ್ಪ ಮುಂಚೆ ನಡೆದ ಜೆ. ಪಿ. ಚಳುವಳಿ ಅಥವಾ ಸಮಗ್ರ ಕ್ರಾಂತಿಯ ಹೋರಾಟದಲ್ಲಿ ಸಿನಿಮಾ ಮೂಲಕ ಬೆಂಬಲ ವ್ಯಕ್ತಪಡಿಸಿದೆ ಎಂದು ಒಬ್ಬರು, ಬರವಣಿಗೆ ಮೂಲಕ ಎದುರಿಸಿದೆ ಎಂದು ಇನ್ನೊಬ್ಬರು, ಭಾಷಣದಲ್ಲಿ ಮುಖಾಮುಖಿಯಾದೆ ಎಂದು ಮಗದೊಬ್ಬರು, ಇದೇ ಸಂದರ್ಭದಲ್ಲಿ ವಿದೇಶಕ್ಕೆ ಹಾರಿಹೋದವರು, 'ಪದ್ಮಭೂಷಣ' ಹಿಂದಿರುಗಿಸಿ ಕೈಚೆಲ್ಲಿದ ಹಿರಿಯರು, ಹೀಗೆ ನಾನಾ ಪಾತ್ರಧಾರಿಗಳನ್ನು ಏಕಕಾಲಕ್ಕೆ ಜನ ನೋಡುವಂತೆ ಆಯಿತು. ಸೆರೆಮನೆ ಹೊಕ್ಕು ಬಂದ ಜುಮಾ ಅವರು ಇಂಥ ಮುಖಹೇಡಿಗಳನ್ನು ಕಂಡು, ಭವಿಷ್ಯದ ಬಗ್ಗೆ ಚಿಂತಿಸುವಂತೆ ಆಗಿದ್ದು ಕಟು ವಾಸ್ತವ.

ಈ ಎಲ್ಲ ಅಲೆಗಳ ನಡುವೆ ಇನ್ನೂ ಮುಳುಗದೆ ಉಳಿದ ಅಂಬೇಡ್ಕರ್ ಅವರ ವಿಚಾರ, ಸಿದ್ಧಾಂತ, ಹೋರಾಟಗಳನ್ನು ಈ ಬುದ್ಧಿಜೀವಿಗಳು ವಿಶ್ವವಿದ್ಯಾನಿಲಯದ ವರೆಗೆ ಮಾತ್ರವಲ್ಲ, ತಮ್ಮ ಬಳಿಗೇ ಬಿಟ್ಟುಕೊಳ್ಳಲಿಲ್ಲ ಏಕೆ ಎಂಬುದು, ತಮ್ಮ ವರ್ಗ ನೆಲೆಯ ಹಿತರಕ್ಷಣೆ ಬಗ್ಗೆ ಕಾಳಜಿ ತೋರಿಸುವುದು ಮಾತ್ರವೇನಾ ? ಅಥವಾ ಸ್ಥಗಿತ ಗೊಂಡ ಬದುಕು—ಬರಹಗಳ ಫಲವೇನು ? ಎಂಬ ಪ್ರಶ್ನೆಗಳು ಬಿಡಿಸಲಾರದ ಒಗಟಾಗಿಯೇ ಉಳಿದಿವೆ.

ವರ್ಗ ಹೋರಾಟದ ವಿಜಯದಿಂದ ವರ್ಣ ಹೋರಾಟವನ್ನು ಪರಿಹರಿಸಬಹು ದೆಂದು ಮಾರ್ಕ್ಸ್‌ವಾದಿಗಳು ತಿಳಿದಿರುವಲ್ಲಿ, ಸ್ವಾತಂತ್ರ್ಯದ ಸಿದ್ಧಿಯಿಂದ ಜಾತಿ ಸಮಾನತೆಯನ್ನು ಪಡೆಯಬಹುದೆಂದು ಗಾಂಧಿವಾದಿಗಳು ವಾದಿಸಿದ್ದು ಸಹಜವೆ. ಹೀಗಾಗಿ, ಅಂಬೇಡ್ಕರ್ ಅವರಿಗೆ ಈ ಎರಡೂ ಬಗೆಗಳು ಅತ್ತ ದರಿ ಇತ್ತ ಪುಲಿ ಎನ್ನುವಂತೆ ಕಂಡದ್ದು ಆಶ್ಚರ್ಯವಿಲ್ಲ, ಈ ಮಧ್ಯೆ ಲೋಹಿಯಾ ಅವರು ಅಂಬೇಡ್ಕರ್ ಅವರ ಕೊನೆಗಾಲದಲ್ಲಿ ಸಮಾಜವಾದದ ಕಡೆಗೆ ಎಳೆಯಲು ಪ್ರಯತ್ನಿಸಿದ್ದುಂಟು. ಬಿಳಿಯರಿಂದ ಕಪ್ಪು ಜನರನ್ನು ಉಳಿಸಲು ಸತ್ಯಾಗ್ರಹ ತಂತ್ರ ಕಲಿತುಬಂದ ಗಾಂಧೀಜಿ, ಸ್ವದೇಶದಲ್ಲಿ ಸ್ವದೇಶೀಯರಿಂದ ಬಹಿಷ್ಕೃತರಾದ ಜನಾಂಗಕ್ಕೆ ಒಂದು ಹೆಸರು ಇಡುವ, ಮುಂದಾಳಿಗೆ ಮಂತ್ರಿ ಪದವಿ—ನ್ಯಾಯಾಂಗ ರಚನೆಯ ಅಧಿಕಾರ ನೀಡುವ, ಕೊನೆಗೆ ಮುಂದಿನ ಜನ್ಮದಲ್ಲಿ ತಾನೂ ಆ ಜಾತಿಯಲ್ಲಿಯೇ ಹುಟ್ಟುವ ಆಸೆ ಭರವಸೆ ಮೂಲಕ ಚಿರಂತನ ಶಾಪಕೊಟ್ಟ ಮಹಾತ್ಮನ ಮುಂದೆ-ಅಂಬೇಡ್ಕರ್ ಮಣಿಯದೆ ವಿಧಿಯಿರಲಿಲ್ಲ. ಅನ್ಯಥಾಗತಿ ಇಲ್ಲದೆ ಹಿಂದೂ ಧರ್ಮಕ್ಕೇ ಬಹಿಷ್ಕಾರ ಹಾಕಿ, ಸಾವಿಗೆ ಅಣಿಯಾದ ಅಂಬೇಡ್ಕರ್ ಅವರನ್ನು, ಇನ್ನೂ ಬದುಕಿ ಉಳಿದಿರುವ ದಲಿತ ಬಂಧುಗಳು ತಡವಾಗಿ ನೆನೆಯುವ ಪ್ರಯತ್ನ ಮಾಡಿದರು. ಮೊದಲು ತನ್ನವರ ಬಂಧ ವಿಮೋಚನೆ, ಅವರಿಗೆ ಮೀಸಲಾತಿ, ಶಿಕ್ಷಣ, ಸಾಂಸ್ಕೃತಿಕ ತರಬೇತಿ, ಉದ್ಯೋಗ, ರಾಜಕೀಯ ಅಧಿಕಾರ, ಸುಭದ್ರ ಸಹಬಾಳ್ವೆಗೆ ನಿರಂತರ ಹೋರಾಡಿದ ಅಂಬೇಡ್ಕರ್ ಅವರ ಬದುಕು-ತತ್ವಗಳನ್ನು ಕರ್ನಾಟಕದಲ್ಲಿ 70ರ ದಶಕದಲ್ಲಿ ಬರಗೊಟ್ಟಿದ್ದು, ತ್ವರಿತ ಗತಿಯಲ್ಲಿ ದಲಿತ ಸಂಘರ್ಷ ಸಮಿತಿಗಳು ನೆಲೆ ಗೊಂಡಿದ್ದು, ಕರ್ನಾಟಕ ಸಂದರ್ಭದ ಮಾರ್ಕ್ಸ್‌ವಾದಿ ಲೋಹಿಯಾವಾದಿಗಳ ನಿಷ್ಕ್ರಿಯತೆಯನ್ನೂ ಎತ್ತಿ ತೋರಿಸುತ್ತಿದೆ. ದಲಿತರ ಹೋರಾಟ, ಸವರ್ಣೀಯರ ದೌರ್ಜನ್ಯ ತಪ್ಪಿದ ದಿನ ಇನ್ನೂ ಬರಲಿಲ್ಲ. ಈ ನಡುವೆ ಬಿ. ಬಸವಲಿಂಗಪ್ಪನವರು ಹುಟ್ಟು ಹಾಕಿದ ಬೂಸಾ ಪ್ರಕರಣ, ಇದೀಗ ಪೇಜಾವರ ಸ್ವಾಮಿಗೆ ಎಚ್ಚರಿಕೆ ನೀಡುವ ಮೂಲಕ ಕಣಕ್ಕೆ ಇಳಿದ ಸುಂಗನಹಳ್ಳಿ ಪ್ರಕರಣ—ಇವು ದಲಿತರ ನಾನಾ ಸ್ಥಿತಿಗೆ ಹಿಡಿದ ಕನ್ನಡಿಯಾಗಿದೆ.

ಇನ್ನು ಅಲ್ಲಲ್ಲಿನ ಟ್ರೇಡ್ ಯೂನಿಯನ್‌ಗಳ ಮುಷ್ಕರಗಳು, ಬಾಬಯ್ಯ ಸಂಗಡಿಗರು ಎದುರಿಸಿದ ಜೀತಪದ್ಧತಿ ವಿಮೋಚನೆ, ಸಾಂಸ್ಕೃತಿಕ ರಂಗದಲ್ಲಿ ಚಿತ್ರಾ, ಸಮುದಾಯ ಮತ್ತು ಜನಕಲಾ ಮಂಡಲಿ ತಂಡಗಳವರು ಉಂಟು ಮಾಡಿದ ಜಾಗೃತಿ ಇವುಗಳ ಮುಂದುವರಿದ ರೂಪವಾಗಿ ಗೌರಿಬಿದನೂರಿನ ಮಿತ್ರರು ಕೈಗೊಂಡ ಭೂ ಆಕ್ರಮಣ ಹೋರಾಟ, ಅದರ ಪರಿಣಾಮದ ಶಂಭೂಕ ನಗರ ನಿರ್ಮಾಣ—ಇವೆಲ್ಲಾ ಮರಳುಗಾಡಿನ ಓಯಸಿಸ್ ಆಗಿ ನನಗೆ ಕಾಣುತ್ತಿವೆ.

ಹೀಗೆ ಹೋರಾಟಗಳು ಅನೇಕ ಬಗೆಯ ದಾರಿ ಹಿಡಿದು ಹೊರಟಾಗ, ಕನ್ನಡ ಸಾಹಿತ್ಯ ಪರಿಷತ್ತಿನ ಧೋರಣೆ ಕುರಿತ ವಿರೋಧದ ನೆಪದಲ್ಲಿ, 1979ರಲ್ಲಿ ಮೊದಲ ಬಂಡಾಯ ಸಾಹಿತ್ಯ ಸಮಾವೇಶ ಬೆಂಗಳೂರಿನಲ್ಲಿ ಸೇರಿತು. ಕೇವಲ ಎಡಪಂಥೀಯ ಧೋರಣೆಗಳನ್ನು ಉಳಿಸಿಕೊಂಡ ಆದರೆ ಮಾರ್ಕ್ಸ್‌ವಾದಿ, ಲೋಹಿಯಾ ಸಮಾಜವಾದಿ, ಅಂಬೇಡ್ಕರ್ ನೆಲೆಯಿಂದ ಬಂದ ದಲಿತರು ತಮ್ಮ ತಮ್ಮ ಮೂಲ ನೆಲೆಗಳನ್ನು ಬಚ್ಚಿಟ್ಟುಕೊಂಡೇ ಅಲ್ಲಿ ಸೇರಿದ್ದು ಒಂದು ವೈಶಿಷ್ಟ್ಯ ಹಾಗೂ ಸಾಧನೆ ಎಂದು ಹೇಳಬಹುದು.

ಅಂದೇ 'ವಿಮರ್ಶೆ ಮತ್ತು ಸೈದ್ಧಾಂತಿಕ ಹೋರಾಟ' ಎಂಬ ಗೋಷ್ಠಿಯ ಅಧ್ಯಕ್ಷತೆ ವಹಿಸಿ ಬಿ. ಕೃಷ್ಣಪ್ಪನವರು ಆಡಿದ ಮಾತುಗಳೂ ಈ ಕುರಿತೇ ಆಗಿದ್ದು, ಇವತ್ತಿಗೂ ಎಚ್ಚರಿಕೆ ತಂದುಕೊಡುವಂಥಾದ್ದೇ :

"ಆದ್ದರಿಂದ ಇವರು ಜಾತಿ ಮತ್ತು ವರ್ಗಗಳನ್ನು ಏಕಕಾಲದಲ್ಲಿ ನಿರ್ಮೂಲನಗೊಳಿಸುವಂತಹ ಕ್ರಾಂತಿಕಾರಿ ಧೋರಣೆಯನ್ನು ನಾವು ರೂಪಿಸಿಕೊಳ್ಳಬೇಕಾಗಿದೆ. ಆ ರೀತಿಯ ಹೋರಾಟವು ಜಾತಿಯಿಂದ—ವರ್ಗದಿಂದ ತುಳಿತಕ್ಕೆ ಒಳಗಾದ ದಲಿತರಿಂದ ಮಾತ್ರ ಸಾಧ್ಯ. ಬಂಡಾಯ ಚಳುವಳಿ ಕ್ರಾಂತಿ ಕ್ರಾಂತಿಯಾಗಿ ಯಶಸ್ವಿಯಾಗಬೇಕಾದರೆ ದಲಿತರು ಅವರ ಮುಂಚೂಣಿಯಲ್ಲಿರಬೇಕಾಗಿದೆ ಅವರೊಂದಿಗೆ ಹೆಗಲುಕೊಟ್ಟು ಎಲ್ಲ ಎಡಪಂಥೀಯರು, ಪ್ರಗತಿಪರರು ಕೆಲಸ ಮಾಡಬೇಕಾಗಿದೆ. ಆಗ ಇಂಥ ಕ್ರಿಯಾಶೀಲ ಚಳುವಳಿಯ ಅಂಗವಾಗಿ ಹುಟ್ಟುವ ಸಾಹಿತ್ಯ ತನ್ನ ಪೂರ್ಣಸ್ವರೂಪದಲ್ಲಿ ಬಂಡಾಯವಾಗಿ ಉಳಿಯಬಲ್ಲದು."

ಕಳೆದ 10 ವರ್ಷಗಳಿಂದಲೂ ಕರ್ನಾಟಕ ಸಂದರ್ಭದಲ್ಲಿ ಮಾರ್ಕ್ಸ್‌ವಾದ ಲೋಹಿಯಾವಾದಿಗಳು ತಳೆದ ಪ್ರತಿಕ್ರಿಯಾತ್ಮಕ ರಾಜಕೀಯ ನಿಲವನ್ನು ತೋರೆದು, ತತ್ವಾಧರಿತ ಮೌಲ್ಯಗಳ ನೆಲೆಗೆ ತಲಪಲಿಲ್ಲವಾಗಿ ; ಇನ್ನು ಉಳಿದಿರುವುದು ಒಂದೇ ಎಂದು ತೋರುತ್ತಿದೆ : ಪರಸ್ಪರ ಮೈಗೂಡದ ಮಾರ್ಕ್ಸ್‌ವಾದ-ಲೋಹಿಯಾವಾದಿಗಳನ್ನು ಕೈಬಿಟ್ಟು, ಅಂಬೇಡ್ಕರ್ ನೆಲೆಯಿಂದ ಬಂದ ದಲಿತರು, ಬಂಡಾಯ ಸಂಘಟನೆಯ ಚಾಲಕತ್ವ ಮಾತ್ರವಲ್ಲ, ಸಮಾಜದ ನಾಯಕತ್ವವನ್ನು ವಹಿಸಿಕೊಳ್ಳದೆ ಇರುವ ಅನಿವಾರ್ಯತೆ ಹಾಗು ಬಿಕ್ಕಟ್ಟು ಉಂಟಾಗಿದೆ ಎಂಬುದನ್ನು, ಕರ್ನಾಟಕದ ಈ 100 ವರ್ಷಗಳ ಸಮಾಜ ಚರಿತ್ರೆ ಬೊಟ್ಟು ಮಾಡಿ ತೋರಿಸುತ್ತಿದೆ.

# ನನ್ನೊಬ್ಬನ ಬರಹ ವಿವಾದಾಸ್ಪದವೇ ? 'ಆರ್ಕೆ' ಪ್ರಶ್ನೆ

ಮಾನ್ಯರೆ,

'ಅನ್ವೇಷಣೆ' ಸಂ. 37ರಲ್ಲಿ ಗೆಳೆಯ ಆರ್. ವಿ. ಭಂಡಾರಿ ಅವರು ನನ್ನ ಬರೆಹದ ಬಗೆಗೆ ಪ್ರತಿಕ್ರಿಯಿಸಿದ್ದಾರೆ. ನಾನು ಅವರಲ್ಲಿ ಈ ಕೆಳಗಿನ ಅಂಶಗಳಿಗೆ ಸಂಬಂಧಿಸಿದಂತೆ ಸ್ಪಷ್ಟೀಕರಣ ಕೋರಿ ಈ ಪತ್ರ ಬರೆಯುತ್ತಿದ್ದೇನೆ :

1. ನನ್ನ ಬರೆಹದಲ್ಲಿ 'ವಿವಾದಾಸ್ಪದ ಸಂಗತಿ' ಏನಿದೆ ಎಂದು ಭಂಡಾರಿ ಅವರು ನಮೂದಿಸಿಲ್ಲ.

2. ಅನ್ವೇಷಣೆ 33 ಮತ್ತು 34ರ ಸಂಚಿಕೆಗಳಲ್ಲಿ ಉಳಿದ ಯಾವ ಲೇಖಕರಲ್ಲೂ ಇಲ್ಲದ 'ವಿವಾದಾಸ್ಪದ ಸಂಗತಿ' ನನ್ನೊಬ್ಬನ ಬರೆಹದಲ್ಲಿ ಮಾತ್ರ ಕಾಣಿಸಿತೇ? ಮತ್ತು, ಹಾಗಿದ್ದರೂ ನನ್ನ ಬರೆಹ 'ಹೆಚ್ಚು ವಸ್ತುನಿಷ್ಠ'ವಾದುದು ಹೇಗೆ ?

3. ನನ್ನ ಬರೆಹದ 'ವಸ್ತುನಿಷ್ಠತೆ'ಯ ಗುಣದಿಂದಾಗಿ ಅದನ್ನು ಜೀರ್ಣಿಸಿಕೊಳ್ಳಲು ಸಂಘಟನೆಗೆ ಅಶಕ್ಯವಾದೀತೆಂಬ ಶಂಕೆ ಅಥವಾ ಅವರ ಅನುಭವ, ನನ್ನ ಬರೆಹವನ್ನು ಸಂಘಟನೆ ಗಂಭೀರವಾಗಿ ಸ್ವೀಕರಿಸಲೇಬೇಕು ಎಂದು ನನ್ನ ಪರವಾಗಿ ವಕಾಲತ್ತು ವಹಿಸುವಂತೆ ಅವರನ್ನು ಒತ್ತಾಯಿಸಿರಬಹುದು.

4. ಅವರ ಒಟ್ಟು ವಾದದಿಂದಾಗಿ, ಸಂಘಟನೆಯನ್ನು (ಅಂದರೆ ಕೇಂದ್ರ ಸಮಿತಿಯ ಸಂಚಾಲಕರುಗಳನ್ನು) ಒಂದು ಕಡೆಯಿಂದ ಓಲೈಸುತ್ತಲೇ ನನ್ನ ಬಗೆಗೂ ಗೌರವ ಪ್ರಕಟಿಸುವ ಇಬ್ಬಗೆಯ ನೀತಿ ವ್ಯಕ್ತವಾದಂತಾಗಿದೆ.

5. ಮತ್ತು, ಅವರ ಬರೆಹದ ಒಟ್ಟಾರೆ ಧೋರಣೆಯಿಂದಾಗಿ ನಾನು ಸಂಘಟನೆಯ ಹೊರಗಿನವನೆಂಬ ಅನುಭವ ಓದುಗನಿಗಾದರೆ ಆಶ್ಚರ್ಯವಿಲ್ಲ.

ಬಂಡಾಯ ಸಾಹಿತ್ಯ ಸಂಘಟನೆ ತನ್ನ ಘೋಷಿತ ಧ್ಯೇಯೋದ್ದೇಶಗಳನ್ನು ಎತ್ತಿ ಹಿಡಿಯುವ ಯಾವುದೇ ಚಟುವಟಿಕೆಗಳಲ್ಲಿ ನಾನು ಕ್ರಿಯಾಶೀಲ ಪಾತ್ರ ವಹಿಸುತ್ತೇನೆಂದೂ, 'ಬಂಡಾಯ'ವನ್ನು 'ಭಂಡಾಯ'ವನ್ನಾಗಿಸುವ ಯಾವುದೇ ಕಾರ್ಯಕ್ರಮಗಳಲ್ಲಿ ನನ್ನನ್ನು ನಾನು ತೊಡಗಿಸಿಕೊಳ್ಳಲಾರೆನೆಂದೂ, ಆರ್. ವಿ. ಅವರಿಗೆ ಉದ್ದಕ್ಕೂ ಹೇಳುತ್ತ ಬಂದಿದ್ದೇನೆ. ಸಂಘಟನೆಯೇ ತನ್ನ ದಶಮಾನೋತ್ಸವದ ಸಂಕಿರಣ ಜರುಗಿಸಿದಾಗ ನನ್ನನ್ನು ಪ್ರಬಂಧ ಮಂಡನೆಗೆ ಆಹ್ವಾನಿಸದಿದ್ದುದಕ್ಕೆ ತೀವ್ರಾಕ್ಷೇಪ ವ್ಯಕ್ತಪಡಿಸಿ ಕೇಂದ್ರ ಸಮಿತಿಗೆ ಬರೆದಿದ್ದ ಅದೇ ಆರ್. ವಿ. ಗೆ ನಾನು ಹೀಗೆ ಬರೆದು ತಿಳಿಸಬೇಕಾಗಿ ಬಂದಿರುವುದು ದುರದೃಷ್ಟಕರ. ಸಂಘಟನೆಯ ಈಚಿನ ಪ್ರವೃತ್ತಿಗಳು ಮತ್ತು ವಲಯ

ಸಂಚಾಲಕರಾಗಿ ಆರ್. ವಿ. ಅವರು ತಮ್ಮ ಹೊಣೆಯನ್ನು ಸಮರ್ಪಕವಾಗಿ ನಿರ್ವಹಿಸಲಾರದೆ ಹೋದುದು ವ್ಯಕ್ತಿವಾದಿ ಹಾಗೂ ಅನುಕೂಲವಾದಿ ಒಲವುಗಳಿಗೆ ಅವರು ಶರಣಾದುದರ ದ್ಯೋತಕವೆಂದೇ ತಿಳಿಯುತ್ತೇನೆ. ಉಳಿದ ಬಂಡಾಯಗಾರರಿಗಿಂತ ಹೆಚ್ಚಿನ ತೀಕ್ಷ್ಣ ವಿಚಾರಗಳು ಹಾಗೂ ನಿಸ್ಸಂಧಾನಶೀಲದಿಂದಾಗಿಯೇ ನಾನು 'ವಿವಾದಾಸ್ಪದ'ನಾಗಿರಬಹುದೇ ? ಆರ್. ವಿ. ಅವರ ಪ್ರೀತ್ಯಾದರಗಳೊಂದಿಗೆ ನನಗೆ ನಿಷ್ಠುರ ನಿಲುವಿನ ಉತ್ತರಬೇಕು.

—ಆರ್ಕೆ. ಮಣಿಪಾಲ
ಮಣಿಪಾಲ—576119.

# ಡಾ॥ ಆರ್ಕೆಯವರ ಪ್ರಶ್ನೆಗಳಿಗೆ ಭಂಡಾರಿ ಉತ್ತರ

ಮಾನ್ಯ ಸಂಪಾದಕರೆ,

ಪ್ರಿಯ ಆರ್ಕೆಯವರು 'ಅನ್ವೇಷಣೆ' 37ರಲ್ಲಿಯ ನನ್ನ ಪ್ರತಿಕ್ರಿಯೆ ಕುರಿತು ಮತ್ತು ಒಬ್ಬ ಬಂಡಾಯ ಸಾಹಿತ್ಯ ಸಂಘಟನೆಯ ಸಂಚಾಲಕನಾಗಿ ಈಗಿತ್ತ ನಿರ್ವಹಿಸಿದ ಕೆಲಸದ ಕುರಿತಾಗಿ ಕೇಳಿರುವ ಪ್ರಶ್ನೆ ಮತ್ತು ಆರೋಪಕ್ಕೆ ನನ್ನ ವಿವರಣೆಯನ್ನು ಕೂಡಲೇ ಕಳಿಸಲು ಕೇಳಿದ್ದೀರಿ. ಅವಕ್ಕೆ ಸಂಬಂಧಿಸಿದ ನನ್ನ ಸಂಚಿಕೆಯನ್ನು ಯಾರೋ ಒಯ್ದಿದ್ದರು. ನೀವು ಹೇಗೂ 'ಬಂಡಾಯ ಹತ್ತು ವರ್ಷ' ಕಳಿಸುತ್ತೀರಿ ಎಂದು ಸುಮ್ಮನಿದ್ದೆ. ಆದರೆ ಈಗ ಆ ಸಂಚಿಕೆ(37)ಯನ್ನು ದೊರಕಿಸಿಕೊಂಡು ನೀವು ಹೇಳಿದಂತೆ ಸಂಕ್ಷಿಪ್ತವಾಗೇ ಉತ್ತರ ಬರೆಯುತ್ತಿದ್ದೇನೆ. ಆದ್ದರಿಂದ ಉತ್ತರ ಎರಡು ದಿನ ತಡವಾಯಿತು. ಕ್ಷಮೆ ಇರಲಿ.

1. ಅನ್ವೇಷಣೆ—33ರಲ್ಲಿ ಆರ್ಕೆ ಈ ಹತ್ತು ವರ್ಷದಲ್ಲಿ ಒಂದೇ ಒಂದು ಮಹತ್ವದ (ಬಂಡಾಯ ಪ್ರಕಾರದ) ಕಲಾಕೃತಿ ಬಂದಿಲ್ಲ ಎಂದೂ, ಸಂಘಟನೆಯ ನಾಯಕರೆನಿಸಿಕೊಂಡವರ ಕೃತಿಗಳೇ ಕಳಪೆಯಾಗಿರುವುದು ಇನ್ನೊಂದು ವಿಡಂಬನೆಯೆಂದೂ, ಸಂಘಟನೆ ಹುಟ್ಟಿದ ಸಂದರ್ಭದಲ್ಲಿ ಮೊಳಗಿದ 'ಖಡ್ಗವಾಗಲಿ ಕಾವ್ಯ; ಜನರ ನೋವಿಗೆ ಮಿಡಿವ ಪ್ರಾಣಮಿತ್ರ' ಎಂಬ ಘೋಷಣೆ ಕಾಲಾನುಕ್ರಮದಲ್ಲಿ ಮೂರ್ತರೂಪ ಪಡೆಯದ ಯುಟೋಪಿಯನ್ ಕಲ್ಪನೆಯಾಗಿ ಅವಸಾನವಾಯಿತು. ಎಂದಿದ್ದಾರೆ. ಇದನ್ನು ಓದಿದಾಗ ನನ್ನ ಮನಸ್ಸಿನಲ್ಲಿದ್ದುದು ಇದು ಸಂಘಟಕರ ಮತ್ತು ಬಂಡಾಯ ಲೇಖಕರ ಮುನ್ನೆಚ್ಚರಿಕೆಗೆ ಆಸ್ಪದ ಕೊಡುವಂತಹುದು ಎಂಬಷ್ಟೇ ಇತ್ತೇ ಹೊರತು ಅದನ್ನು ತಿರಸ್ಕರಿಸುವುದಾಗಿರಲಿಲ್ಲ. ಆದ್ದರಿಂದ 'ವಿವಾದಾಸ್ಪದ' ಎಂದು ಹೇಳಿದೆ ; ಅಷ್ಟೆ.

2. 33-34ರ ಸಂಚಿಕೆಯಲ್ಲಿ ಬಂದ ಉಳಿದವರ ಅಭಿಪ್ರಾಯಗಳು ವಿವಾದಾಸ್ಪದ ಅಲ್ಲ ಎಂದಾಗಲಿ, ಅವುಗಳ ಬಗ್ಗೆ ನನ್ನ ಅಗೌರವ ಎಂದಾಗಲಿ ಇದರರ್ಥವಲ್ಲ. ಉಳಿದವರು ಹೆಚ್ಚಾಗಿ ಸಾಹಿತ್ಯ ಪ್ರಕಾರಗಳಿಗೆ ಮಾತ್ರ ಹೆಚ್ಚು ಒತ್ತುಕೊಟ್ಟಿದ್ದಾರೆ.

ಒಬ್ಬ ಸಂಘಟಕನಾಗಿ ನನಗೆ ಆರ್ಕೆಯವರ ಉತ್ತರ 5-6 ಹೆಚ್ಚು ಗಮನ ಸೆಳೆಯಿತು. ಅದರಲ್ಲಿ ಸಂಘಟನೆಯ ಶಿಸ್ತು ಹಾಗೂ ವೈಚಾರಿಕ ಶಿಸ್ತಿನ ಬಗ್ಗೆ ಹೆಚ್ಚು ಒತ್ತು ಕೊಟ್ಟಿದ್ದು, ಅದನ್ನು ಗಮನದಲ್ಲಿಟ್ಟುಕೊಂಡೇ 'ಹೆಚ್ಚು ವಸ್ತುನಿಷ್ಠ' ಎಂದುದು.

3. ಈ ಹೇಳಿಕೆಯ ಕುರಿತು ನಾನು ವಕಾಲತು ವಹಿಸಲಿಲ್ಲ. ಇದನ್ನು ಪ್ರತಿಪಾದಿಸಲು ನನ್ನಂತವನ ವಕೀಲಿ ಅವರಿಗಾಗಲಿ ಸಂಘಟನೆಗಾಗಲಿ ಅವಶ್ಯವಿದೆ ಎಂದು ನನ್ನ ಅನ್ನಿಸಿಕೆಯಲ್ಲ. ಸಂಘಟಕರಲ್ಲಿ ಒಬ್ಬನಾಗಿ-ನಾನೇನು ಮುಖ್ಯ ಅಲ್ಲವಾದರೂ ಉಳಿದೆಲ್ಲರ ಗಮನವನ್ನು ಈ ಕಡೆ ಸೆಳೆಯುವುದು ನನ್ನ ಉದ್ದೇಶವಾಗಿತ್ತು. ಅವರ ಹೇಳಿಕೆಯನ್ನು ಜೀರ್ಣಿಸಿಕೊಳ್ಳುವ ಶಕ್ತಿ ಸಂಘಟನೆಗೆ ಇಲ್ಲ ಎಂದು ಹೇಳುವಷ್ಟು ಉದ್ಧಟತನ ನನ್ನದಲ್ಲ. ಸಂಘಟನೆ ಪ್ರಾರಂಭಿಕ ಹಂತದಲ್ಲಿ ಕಠಿಣವಾದ ನಿಯಮಗಳನ್ನು ಪಾಲಿಸಿದೆ. ಅಂದ ಮೇಲೆ ಜೀರ್ಣಿಸಿಕೊಳ್ಳುವ ಅದರ ಶಕ್ತಿಯ ಬಗ್ಗೆ ನನಗೆ ಸಂಶಯವಿಲ್ಲ. ಮುಂದೆ-ಮುಂದೆ ಅದು ತನ್ನ ಶಿಸ್ತನ್ನು ಸಡಿಲುಗೊಳಿಸುತ್ತ ಬಂದುದು ನಿಜ. ಅದಕ್ಕೆ ಕಾರಣ ಇದ್ದಿರಬಹುದು. ಆದರೆ ಸಂಘಟನೆಯ ಜೀರ್ಣ ಶಕ್ತಿಯ ಅಭಿವೃದ್ಧಿಗಾಗಿ ನಾನು ಮಹಾ ಕೊಡುಗೆಯನ್ನು ಈ ಮೂಲಕ ಕೊಡುತ್ತಿದ್ದೇನೆಂಬ ಭ್ರಮೆ ನನ್ನದಲ್ಲ.

4. ನನ್ನ ಹೇಳಿಕೆ ಕೇಂದ್ರ ಸಮಿತಿಯ ಸಂಚಾಲಕರನ್ನಾಗಲಿ ಆರ್ಕೆಯವರನ್ನಾಗಲಿ ಓಲೈಸುವುದಕ್ಕಾಗಿ ಇದ್ದುದಲ್ಲ. ಸಂಘಟನೆಯ ಕುರಿತು ಅಭಿಪ್ರಾಯ ಪ್ರಕಟನೆಗೆ ಅವಕಾಶ ಇದೆ ಎಂಬುದು ಮಾತ್ರ ನನ್ನ ನಂಬುಗೆ. ಎರಡೂ ಕಡೆ ಓಲೈಸಬೇಕಾದ ಅವಶ್ಯಕತೆ ಯಾವಾಗ ಬೀಳುತ್ತದೆಂದರೆ ಹಾಗೆ ಮಾಡುವುದರಿಂದ ಸಂಘಟನೆಯಲ್ಲಿ ನನ್ನ ಸ್ಥಾನವನ್ನು ಅಂದರೆ ಜಿಲ್ಲಾ ಸಂಚಾಲಕ, ವಲಯ ಸಂಚಾಲಕ, ಕೇಂದ್ರ ಸಂಚಾಲಕ ಅಥವಾ ಗೋಷ್ಠಿಯ ಅಧ್ಯಕ್ಷತೆ, ಉದ್ಘಾಟನೆ ಇತ್ಯಾದಿಗಳ ಬಯಕೆಯನ್ನು ಭದ್ರಪಡಿಸಿಕೊಳ್ಳಲು ಬಯಸಿದಾಗ. ಸಂಘಟನೆ ಇಂಥ ತಂತ್ರದಿಂದ ಸ್ಥಾನ ಗಿಟ್ಟಿಸುವ ಸ್ಥಿತಿಗೆ ಇಳಿದಿದೆ ಎಂದು ನಾನು ಭಾವಿಸಿಲ್ಲ. ಅಲ್ಲದೆ ಇವೆಲ್ಲವೂ ಸ್ವಯಂ ಇಚ್ಛೆಯಿಂದಲೇ ಆಗುವಂತಹದು. ಸಂಘಟನೆಯ ಯಾವುದೇ ಆಯ್ಕೆ ಮತ್ತು ಕಾರ್ಯಕ್ರಮದಲ್ಲಿ ನನ್ನ ಹೆಸರು ಬಂದಾಗ ನಾನು ಸತತವಾಗಿ ಬೇರೆ ಅರ್ಹ ಸದಸ್ಯರ ಹೆಸರುಗಳನ್ನು ಸೂಚಿಸುತ್ತಲೇ ಬಂದಿದ್ದೇನೆ. ಹಾಗೆ ಸೂಚಿಸಿದ್ದು ಸೂಚಿಸಲ್ಪಟ್ಟವರಿಗೇ ಹೆಚ್ಚಾಗಿ ಗೊತ್ತಿಲ್ಲ! ಅನಿವಾರ್ಯ ಸಂದರ್ಭ ಎಂದುಕೊಂಡಾಗ ಮಾತ್ರ ಉಳಿದು ಬೇರೆ ಸಂದರ್ಭದಲ್ಲಿ ನಾನು ಕೇವಲ ಒಬ್ಬ ಸಕ್ರಿಯ ಸದಸ್ಯನಾಗಿ ಇರಲು ಮಾತ್ರ ಅಪೇಕ್ಷಿಸುತ್ತಾ ಬಂದಿದ್ದೇನೆ. ಇನ್ನು ಮುಂದೂ ಅಷ್ಟೆ. ಇದಕ್ಕೆ ಕಾರಣ ಬಂಡಾಯದಲ್ಲಿ ನನ್ನ ನಿಷ್ಠೆ ಕಡಿಮೆ ಎಂದಲ್ಲ. ಆದರೆ ನನ್ನ ಪರಿಸರ-ಪರಿಸ್ಥಿತಿ ಹಾಗಿರುವುದಕ್ಕಾಗಿ ಮಾತ್ರ. ಹಾಗಿದ್ದ ಮೇಲೆ ಆರ್ಕೆಯವರನ್ನಾಗಲಿ, ಕೇಂದ್ರ ಸಂಚಾಲಕರುಗಳನ್ನಾಗಲಿ ಓಲೈಸುವ ಪ್ರಶ್ನೆ ಎಲ್ಲಿ ಬಂತು? ಆದರೆ ಈ ಎಲ್ಲರೂ ನನಗೆ ಪ್ರಿಯರೇ ಆಗಿದ್ದಾರೆ. ನಾನು ವಲಯ ಸಂಚಾಲಕನಾಗಿರುವುದರಿಂದ ಕೇಂದ್ರ ಮತ್ತು

ಜಿಲ್ಲೆಗಳ ಮಧ್ಯಕೊಂಡಿಯಾಗಿ ಕೆಲಸ ಮಾಡಬೇಕಾಗುತ್ತದೆಂದು ಮಾತ್ರ ನನ್ನನಂಬಿಕೆ.

5. ಸಂಘಟನೆ ಗಂಭೀರವಾಗಿ ಗಮನಿಸಬೇಕು. ಎಂದ ನನ್ನ ಹೇಳಿಕೆಯಿಂದ ಆರ್ಕೆಯವರು ಸಂಘಟನೆಯ ಹೊರಗಿನವರು ಎಂಬ ಅಭಿಪ್ರಾಯ ಬರುತ್ತದೆಯೆ ? ಹಾಗಿದ್ದರೆ ನಾನೂ ಹೊರಗಿನವ ಎಂದೇ ಆಗುವುದಿಲ್ಲವೆ ? ನಾನು ಹೊರಗಿನವ ಎಂಬ ಅಭಿಪ್ರಾಯ ಬಂದರೂ ಅದೇನೂ ದೊಡ್ಡದಲ್ಲ ಎಂದಿಟ್ಟುಕೊಳ್ಳೋಣ. ಆದರೆ ಆರ್ಕೆ ಹೊರಗಿನವರು ಎಂಬಭಿಪ್ರಾಯ ಹೊರಡುತ್ತದೆ ಎಂದು ನನಗೆ ಅನ್ನಿಸಿಲ್ಲ. ಸಂಚಾಲಕರನ್ನೇ ಗಮನದಲ್ಲಿಟ್ಟುಕೊಂಡು ಹೇಳಿದ್ದೇ ಹೊರತು ಅಂಥ ಸೂಕ್ಷ್ಮಾಸೂಕ್ಷ್ಮ ಅರ್ಥದ ಪದರನ್ನು ನಾನು ಊಹಿಸಲಿಲ್ಲ. ಅಷ್ಟಾಗಿಯೂ ಅದರ ಅಭಿಪ್ರಾಯ ಆರ್ಕೆ ಅರ್ಥೈಸಿದಂತೇ ಆಗುವುದಾದರೆ ಮತ್ತು ಏನೇ ಆಗಿರಲಿ ಅದರಿಂದ ಪ್ರಿಯ ಆರ್ಕೆ ಅವರಿಗೆ ನೋವಾಗುತ್ತದಾದರೆ ನಾನು ಕ್ಷಮೆ ಕೇಳುತ್ತೇನೆ.

6. ನಾನು ವ್ಯಕ್ತಿವಾದಿಗಳಿಗೆ ಶರಣಾಗಿ ಈಗಿತ್ತಲಾಗಿ ನನ್ನ ಕೆಲಸ ಸರಿಯಾಗಿ ನಿರ್ವಹಿಸುತ್ತಿಲ್ಲ ಎಂಬ ಗುಮಾನಿಯ ಆರೋಪವನ್ನು ಆರ್ಕೆ ಮಾಡಿದ್ದಾರೆ. ಈ ಆರೋಪವನ್ನು ನಾನು ಸ್ವೀಕರಿಸಲು ಸಿದ್ಧನಿಲ್ಲ. ಈಗಿತ್ತಲಾಗಿನ ಕಾರ್ಯಕ್ರಮ ಮತ್ತು ನನ್ನ ಕಾರ್ಯ ವಿಧಾನದ ಕುರಿತು ನಮ್ಮ ಮಧ್ಯೆ ಅನೇಕ ಪತ್ರ ವ್ಯವಹಾರಗಳು ನಡೆದಿವೆ. ಆದರೆ ಅದರಲ್ಲಿ ಯಾವುದೇ ವ್ಯಕ್ತಿಗಳ ಕುರಿತ ದೂಷಣೆಯಾಗಲಿ ನಮ್ಮಿಬ್ಬರ ಮಧ್ಯೆ ಆರೋಪ ಪ್ರತ್ಯಾರೋಪಗಳಾಗಲಿ ಇಲ್ಲ ಎಂದು ಸ್ಪಷ್ಟಪಡಿಸುತ್ತೇನೆ. ಆದರೂ ಆ ಖಾಸಗಿ ಪತ್ರವ್ಯವಹಾರ ಇಲ್ಲಿ ಅಪ್ರಸ್ತುತ. ಆದ್ದರಿಂದ ಆರ್ಕೆಯವರು ಯಾವ ನಿರ್ದಿಷ್ಟ ಸಂಗತಿಗಳ ಕುರಿತು ಈ ನಿರ್ಣಯಕ್ಕೆ ಬಂದಿದ್ದಾರೆ ಎಂದು ಸ್ಪಷ್ಟಪಡಿಸಿದರೆ ನನಗೆ ವಿವರಿಸಲಿಕ್ಕೂ ಮತ್ತು ನನ್ನ ತಪ್ಪಾದರೆ ತಿದ್ದುಕೊಳ್ಳಲಿಕ್ಕು ಅನುಕೂಲವಾಗುತ್ತದೆ. ಇದರಿಂದ ನನ್ನ ಕುರಿತು (ಒಬ್ಬ ಸಂಘಟಕ ಮತ್ತು ಬಂಡಾಯದ ಸದಸ್ಯನಾಗಿ) ಸಾರ್ವಜನಿಕರಿಗೆ ಉಂಟಾಗಬಹುದಾದ ತಪ್ಪು ಕಲ್ಪನೆ ಬದಲಾದರೆ ಆಗಲಿ ಎಂಬ ಕಾರಣಕ್ಕ.

ಆರ್ಕೆ ಅವರ ನಿಸ್ಪಂಧನಶೀಲತೆ ಮತ್ತು ಹೆಚ್ಚಿನ ತೀಕ್ಷ್ಣ ವಿಚಾರದಿಂದ 'ವಿವಾದಾಸ್ಪದ ವ್ಯಕ್ತಿ' ಆಗಿದ್ದಾರೆ ಎಂಬು ನನ್ನ ಅಭಿಪ್ರಾಯ ಅಲ್ಲವೇ ಅಲ್ಲ. ಅವರಿಗೆ ಸಂಘಟನೆಯ ಕುರಿತು ಇರುವ ಕಳಕಳಿ ಮತ್ತು ಅವರ ವಿಮರ್ಶನ ಸೂಕ್ಷ್ಮತೆಯ ಬಗ್ಗೆ ನನಗೆ ಗೌರವವಿದೆ. ಮತ್ತು ಇದನ್ನು ಹೊರತುಪಡಿಸಿಯೂ ನನಗೆ ಅವರು ಪ್ರೀತಿಯವರು. ಅವರು ವಿವಾದಸ್ಪದರೆಂದು ತೀರ್ಪು ಕೊಡುವ ಮೂರ್ಖತನವನ್ನು ನಾನು ಮಾಡಲಾರೆ. ನಾನು ಸರಿಯಾಗಿ ಕಾರ್ಯ ನಿರ್ವಹಿಸುತ್ತಿಲ್ಲವೆಂದಾದರೆ ಕಾರ್ಯಕರ್ತನನ್ನು ಬದಲಿಸಿಕೊಳ್ಳುವ ಹಕ್ಕು ಮತ್ತು ಹೊಣೆ ಆರ್ಕೆಯವರನ್ನೊಳಗೊಂಡ ಎಲ್ಲ ಸದಸ್ಯರಿಗೆ ಇದ್ದೇ ಇದೆ.

ದಿ. ೨೪.೮.೧೯೯೦

—ಆರ್. ವಿ. ಭಂಡಾರಿ

ಆರೆ ಅಂಗಡಿ (ಉ.ಕ)

ANVESHANE MAG (5) PRB-DECL 127/85-86

**ಮುಂದಿನ ಸಂಚಿಕೆಯಲ್ಲಿ:**

ಡಾ॥ ಎಚ್. ಗಿರಿಜಮ್ಮ
ಜಿ. ಪಿ. ಬಸವರಾಜು
ಪ್ರಹ್ಲಾದ ಅಗಸನಕಟ್ಟೆ
ದಂಗಾರ್ಸುತೆ
ಬಸವರಾಜ ವಕ್ಕುಂದ
ಕೆ. ಎಂ. ಮುನಿಕೃಷ್ಣಪ್ಪ
ಪ್ರತಿಭಾ ನಂದಕುಮಾರ್
ಬಿ. ಎಂ. ಹನೀಫ್
ರಾಜು ಹೆಗಡೆ, ಟಿ. ಯಲ್ಲಪ್ಪ
ಜಿ. ಕುಮಾರಪ್ಪ ಅವರ ಬರಹಗಳು

---

**'ಅನ್ವೇಷಣೆ' ಸಾಹಿತ್ಯ—ಸಾಂಸ್ಕೃತಿಕ ಚಟುವಟಿಕೆಗಳಿಗೆ ಮೀಸಲಾದ ಪತ್ರಿಕೆ**

---

- ನವ್ಯೋತ್ತರ ಕನ್ನಡ ಸಾಹಿತ್ಯದ ಮಹತ್ವದ ದಾಖಲೆಗಳಿಗೆ
- ಪ್ರಗತಿಪರ ವಿಚಾರಗಳಿಗೆ, ಸೈದ್ಧಾಂತಿಕ ಹಿನ್ನೆಲೆಯ ಮುಕ್ತ ವಿಚಾರಗಳಿಗೆ
- ಹಿರಿ-ಕಿರಿ ಬರಹಗಾರರ ತಾತ್ವಿಕ ವಿಚಾರಗಳ ಸಂವಾದಕ್ಕೆ

ಚಂದಾ ವಿವರ : ವಾರ್ಷಿಕ ಚಂದಾ ರೂ. 35 (ವ್ಯಕ್ತಿಗಳಿಗೆ)
ರೂ. 50 (ಗ್ರಂಥಾಲಯಕ್ಕೆ)
ಅಜೀವ ಚಂದಾ ರೂ. 400 (ಒಂದು ಅಥವಾ ನಾಲ್ಕು ಕಂತು) : ವ್ಯಕ್ತಿಗಳಿಗೆ
ರೂ. 500 ಸಂಸ್ಥೆ/ಗ್ರಂಥಾಲಯಕ್ಕೆ

ವಿಳಾಸ : ಸಂಪಾದಕ, "ಅನ್ವೇಷಣೆ", 478,
11ನೇ ಎಂ. ಸಿ. ಬಡಾವಣೆ ರಸ್ತೆ,
ವಿಜಯನಗರ, ಬೆಂಗಳೂರು–560040.

---

ಸಂಪಾದಕ/ಮುದ್ರಕ : ಆರ್. ಜಿ. ಹಳ್ಳಿ ನಾಗರಾಜ್, ಪ್ರಕಾಶಕರು : ಅರುಣ ಯುವ ಲೇಖಕರ ಬಳಗ, ಬೆಂಗಳೂರು-79, ಚೇತನ ಪ್ರಿಂಟರ್ಸ್, ಎಲ್. ಎನ್. ಪುರಂ, ಬೆಂಗಳೂರು-21